# ಕುಡುಬಿಯರ ಮದುವೆ ಹಾಡುಗಳು

## ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ


*ಸಂಶೋಧಕರು*

**ಶ್ರೀಮತಿ ವಿದ್ಯಾಲತಾ**

*ಮಾರ್ಗದರ್ಶಕರು*

**ಡಾ। ಅಶೋಕ ಆಳ್ವ**

ಅಧ್ಯಯನ ಕೇಂದ್ರ

ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ

ಎಂ. ಜಿ. ಎಂ. ಕಾಲೇಜು, ಉಡುಪಿ



ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ

೨೦೦೮

369

# ಕುಡುಬಿಯರ ಮದುವೆ ಹಾಡುಗಳು

## ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ

*ಸಂಶೋಧಕರು*

**ಶ್ರೀಮತಿ ವಿದ್ಯಾಲತ**

*ಮಾರ್ಗದರ್ಶಕರು*

**ಡಾ। ಅಶೋಕ ಆಳ್ವ**

ಅಧ್ಯಯನ ಕೇಂದ್ರ

ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ

ಎಂ. ಜಿ. ಎಂ. ಕಾಲೇಜು, ಉಡುಪಿ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ

೨೦೦೮

# ದೃಢೀಕರಣ ಪತ್ರ

ಶ್ರೀಮತಿ ವಿದ್ಯಾಲತ ಇವರು 'ಕುಡುಬಿಯರ ಮದುವೆ ಹಾಡುಗಳು ಒಂದು ಅಧ್ಯಯನ' ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ್ದಾರೆ. ಈ ಸಂಪ್ರಬಂಧದ ವಿಷಯವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಯಾವುದೇ ಉದ್ದೇಶಕ್ಕಾಗಲಿ ಬಳಸಿಕೊಂಡಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೦೫-೧೦-೨೦೦೮

**ಡಾ। ಅಶೋಕ ಆಳ್ವ**
ಅಧ್ಯಯನ ಕೇಂದ್ರ
ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ
ಎಂ.ಜಿ. ಎಂ. ಕಾಲೇಜು, ಉಡುಪಿ

# ಪ್ರಮಾಣ ಪತ್ರ

'ಕುಡುಬಿಯರ ಮದುವೆ ಹಾಡುಗಳು ಒಂದು ಅಧ್ಯಯನ' ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಡಾ। ಅಶೋಕ ಆಳ್ವ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಎಂ.ಜಿ.ಎಂ. ಕಾಲೇಜು, ಉಡುಪಿ ಇವರ ಮಾರ್ಗದರ್ಶನದಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಲಾಗಿದೆ. ಈ ಸಂಪ್ರಬಂಧದ ವಿಷಯವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಯಾವುದೇ ಉದ್ದೇಶಕ್ಕಾಗಲಿ ಬಳಸಿಕೊಂಡಿಲ್ಲವೆಂದು ಘೋಷಿಸುತ್ತೇನೆ.

Vidyalatha

ದಿನಾಂಕ : ೦೫-೧೦-೨೦೦೮

**ಶ್ರೀಮತಿ ವಿದ್ಯಾಲತ**

ಸಂಶೋಧನ ವಿದ್ಯಾರ್ಥಿನಿ
ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ
ಎಂ.ಜಿ. ಎಂ. ಕಾಲೇಜು, ಉಡುಪಿ

## ಪರಿವಿಡಿ

* * *

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

**ಪೀಠಿಕೆ :**

ಕರಾವಳಿ ಕರ್ನಾಟಕವು ಹಲವಾರು ವೈಶಿಷ್ಟ್ಯಗಳಿಗೆ ಹೆಸರುವಾಸಿಯಾಗಿದೆ. ವಿಭಿನ್ನ ಸಂಸ್ಕೃತಿ ಹಾಗೂ ಜನಾಂಗಗಳಿಗೆ ಆಶ್ರಯನೀಡಿದ ತಾಣವಿದು. ಇಲ್ಲಿ ಹಲವಾರು ಬುಡಕಟ್ಟು ಜನಾಂಗದವರು ನೆಲೆಸಿದ್ದಾರೆ. ಕೊರಗರು, ಮಲೆಕುಡಿಯರು ಮುಂತಾದವರು ಇಲ್ಲಿಯ ಮೂಲ ನಿವಾಸಿಗಳಾದರೆ ಬಹುತೇಕ ಬುಡಕಟ್ಟು ಜನಾಂಗದವರು ನೆರೆಯ ರಾಜ್ಯಗಳಿಂದ ಆಶ್ರಯವನ್ನು ಅರಸಿಬಂದವರು. ಇಲ್ಲಿಗೆ ವಲಸೆ ಬಂದ ಇವರು ಇಲ್ಲಿಯ ಪರಿಸರಕ್ಕೆ ಹೊಂದಿಕೊಂಡು ಭಿನ್ನ ಸಂಸ್ಕೃತಿಗಳ ಮುಖಾಮುಖಿಯೊಡನೆ ತಮ್ಮ ಮೂಲ ಸಂಸ್ಕೃತಿಯನ್ನು ಜತನದಿಂದ ಕಾಪಾಡಿಕೊಂಡುಬಂದಿದ್ದಾರೆ. ಇಂತಹ ಜನಾಂಗಗಳಲ್ಲಿ ಕುಡುಬಿ ಬುಡಕಟ್ಟು ಜನಾಂಗವೂ ಒಂದು.

ಹದಿನಾರನೇ ಶತಮಾನದಲ್ಲಿ ನೆರೆಯ ಗೋವಾ ರಾಜ್ಯದಿಂದ ಪೋರ್ಚುಗೀಸರ ಧಾರ್ಮಿಕ ಕಿರುಕುಳಕ್ಕೆ ಹೆದರಿಕೊಂಡು ತಮ್ಮ ಆರಾಧ್ಯದೈವವಾದ ಗೋವೆಯ ಅಮ್ಮನ ಅಪ್ಪಣೆ ಮೇರೆಗೆ ಊರು ಬಿಟ್ಟರೂ ಅಡ್ಡಿಯಿಲ್ಲ ಜಾತಿ ಬಿಡಬಾರದೆಂದು ತುಳುನಾಡಿಗೆ ವಲಸೆ ಬಂದಿರುವುದನ್ನು ಕಾಣಬಹುದು. ಕರಾವಳಿ ಕರ್ನಾಟಕದ ಮಂಗಳೂರು ಮತ್ತು ಕುಂದಾಪುರದ ವಿಭಿನ್ನ ಪ್ರದೇಶಗಳ ಕಾಡುಗಳಲ್ಲಿ ಗುಂಪಾಗಿ ತಮ್ಮ ಮನೆಗಳನ್ನು ಕಟ್ಟಿ ವಾಸಿಸುತ್ತಿರುವುದನ್ನು ಕಾಣಬಹುದು. ಕುಡುಬಿಯರು ತಮ್ಮ ದೈಹಿಕ ರಚನೆ, ವೇಷಭೂಷಣ, ಆಹಾರಪದ್ಧತಿ ಹಾಗೂ ಆಚರಣೆಗಳಿಂದ ಸ್ಥಳೀಯರಿಗಿಂತ ಭಿನ್ನವಾಗಿ ಕಾಣಿಸುತ್ತಾರೆ. ಇವರ ಮಾತೃಭಾಷೆ ಕೊಂಕಣಿಯಾಗಿದ್ದು ಈಗ ಕನ್ನಡವನ್ನೂ ಪರ್ಯಾಯವಾಗಿ ಮಾತನಾಡುವುದನ್ನು ಕಾಣಬಹುದು.

ಪ್ರಸ್ತುತ ಅಧ್ಯಯನದಲ್ಲಿ ಕುಡುಬಿಯರ ಮದುವೆ ಹಾಗೂ ಮದುವೆ ಹಾಡುಗಳನ್ನು ಮುಖ್ಯವಾಗಿ ಅಭ್ಯಸಿಸಲಾಗಿದೆ. ಅವರ ವಿವಾಹ ಸಂಪ್ರದಾಯದಲ್ಲಿ ಸ್ಥಳೀಯರಿಗಿಂತ ಹಲವಾರು ಬಗೆಯ ಭಿನ್ನ ಹಾಗೂ ವಿಶಿಷ್ಟ ವಿಧಿವಿಧಾನಗಳನ್ನು ಕಾಣಬಹುದು.

ಕುಡುಬಿಯರ ಮದುವೆಗಳು ಎರಡು ವಿಭಿನ್ನ ಬಳಿಗಳೊಳಗೆ ನಡೆಯುತ್ತವೆ. ಇವರಲ್ಲಿ ಮದುವೆ ಹೊತ್ತಿನಲ್ಲಿ ಹಾಡುವ ಹಾಡುಗಳು ಅವರ ಸಂಸ್ಕೃತಿಯ ಮೇಲೆ ಬೆಳಕನ್ನು ಚೆಲ್ಲುತ್ತವೆ.

ಆದರೆ ಇತ್ತೀಚೆಗೆ ನಾಗರೀಕತೆಯ ಪ್ರಭಾವದಿಂದಾಗಿ ಮಾನವನು ತನ್ನ ಜೀವನಕ್ರಮದಲ್ಲೂ ಕೆಲವೊಂದು ಮಾರ್ಪಾಡುಗಳನ್ನು ಮಾಡಿಕೊಂಡೇ ಹೋಗುತ್ತಾನೆ. ಆಧುನಿಕ ಜಗತ್ತಿನ ನವನಾಗರೀಕತೆಯ ನಾಗಾಲೋಟದ ಋಣಾತ್ಮಕ ಪರಿವರ್ತನೆಯಿಂದ ಸಮಾಜಜೀವಿಗಳೆಲ್ಲರೂ ಬೆಚ್ಚಿಬೀಳುವಂತಾಗಿದೆ. ಸಮಾಜದ ಪ್ರತಿಯೊಂದು ಸ್ತರದಲ್ಲಿಯೂ ನಾಗರೀಕತೆಯ ಹೆಸರಿನಲ್ಲಿ ಹಳೆಯ ಮೌಲ್ಯಯುತ ಸಂಸ್ಕೃತಿ ಸಂಸ್ಕಾರಗಳು ಮೂಲೆಗುಂಪಾಗುತ್ತಿರುವುದನ್ನು ನಾವಿಂದು ಕಾಣಬಹುದು.

ಸರಕಾರವು ಕೈಗೊಳ್ಳುತ್ತಿರುವ ಅಭಿವೃದ್ಧಿ ಕಾರ್ಯಗಳು ಇಂದು ಕುಡುಬಿಯರನ್ನು ಬದಲಾವಣೆಯತ್ತ ಕೊಂಡೊಯ್ಯುತ್ತಿದೆ. ಅವರಿಗೆ ಮನೆಗಳನ್ನು ಕಟ್ಟಿಸಲು ಆರ್ಥಿಕ ನೆರವು ವಿದ್ಯುಚ್ಛಕ್ತಿ ಸೌಲಭ್ಯ, ವಾಹನಸಂಚಾರಕ್ಕಾಗಿ ರಸ್ತೆಗಳ ನಿರ್ಮಾಣ, ಶಾಲೆಗಳ ನಿರ್ಮಾಣ ವಾಗಿರುವುದರಿಂದ ವಿದ್ಯಾಭ್ಯಾಸವನ್ನು ಮಾಡುವ ಅವಕಾಶ ದೊರಕಿದೆ. ವಿದ್ಯೆ ಮನುಷ್ಯನ ಮನಸ್ಸಿನಲ್ಲಿ ಹೊಸ ಆಲೋಚನೆಗಳನ್ನು ತುಂಬುತ್ತದೆ. ಹೀಗಾಗಿ ಬದಲಾವಣೆಗಳು ಅನಿವಾರ್ಯ. ಸಂಕುಚಿತ ಮನೋಭಾವ ನಾಶವಾಗಿ ವಿಶಾಲ ಮನೋಭಾವಗಳನ್ನು ಬೆಳೆಸಿಕೊಂಡಿದ್ದಾರೆ. ಹೆಣ್ಣು ಮಕ್ಕಳಿಗೂ ವಿದ್ಯಾಭ್ಯಾಸ ಮಾಡುವ ಅವಕಾಶವಿದೆ. ಹಾಗಾಗಿ ಇಂದು ಹೆಚ್ಚಿನ ಕುಡುಬಿಯರು ಬೇಸಾಯವನ್ನು ಮಾಡುವ ಮೂಲಕ, ಗೋಡಂಬಿ ಕಾರ್ಖಾನೆಗಳಲ್ಲಿ ದುಡಿಯುವ ಮೂಲಕ ಮತ್ತು ತರಕಾರಿಗಳನ್ನು ಬೆಳೆಸಿ ಮಾರಾಟ ಮಾಡುವ ಮೂಲಕ ಆರ್ಥಿಕವಾಗಿ ಸ್ವಾವಲಂಬಿಗಳಾಗಿದ್ದಾರೆ.

ನಾಗರೀಕತೆಯ ಪ್ರಭಾವದಿಂದ ಉಂಟಾಗಿರುವ ಅಭಿವೃದ್ಧಿ ಅವರ ಸಂಸ್ಕೃತಿಯ ಮೇಲೆ ದಾಳಿಇಟ್ಟು ಬಹಳಷ್ಟು ಬದಲಾವಣೆಗಳನ್ನುಂಟುಮಾಡಿದೆ. ಕುಡಿಬಿಯರು ಬಹಳ ಹಿಂದಿನಿಂದಲೂ ನಂಬಿಕೊಂಡು ಬಂದಿರುವ ಕ್ರಮಗಳು, ಆಚರಣೆಗಳು ನಶಿಸಿ ಹೋಗುತ್ತಿರುವುದನ್ನು ಗಮನಿಸ ಬಹುದು. ಕುಡುಬಿಯರ ಆಚರಣೆಗಳನ್ನು ಎರಡು ವಿಧವಾಗಿ ವಿಂಗಡಿಸಿ ಈ ಪ್ರಬಂಧದಲ್ಲಿ ಅಧ್ಯಯನ ವನ್ನು ನಡೆಸಲಾಗಿದೆ. ಒಂದು, ಜೀವನಾವರ್ತನ ಆಚರಣೆಗಳು; ಎರಡು, ವಾರ್ಷಿಕಾವರ್ತನ ಆಚರಣೆಗಳು. ಜೀವನಾವರ್ತನ ಆಚರಣೆಗಳಲ್ಲಿ ಮದುವೆ ಮತ್ತು ಮದುವೆ ಸಂಬಂಧಿ ಹಾಡುಗಳನ್ನು ಮುಖ್ಯವಾಗಿಟ್ಟುಕೊಂಡು ಅಧ್ಯಯನವನ್ನು ನಡೆಸಲಾಗಿದೆ. ಅವುಗಳ ಕುರಿತು ಮಾಹಿತಿ ಸಂಗ್ರಹಣೆಗಾಗಿ ಕ್ಷೇತ್ರಕಾರ್ಯವನ್ನು ಕೈಗೊಂಡಾಗ ಹಿಂದೆ ಕುಡುಬಿಯರ ಮದುವೆಗಳಲ್ಲಿ ಇದ್ದ ವಿಧಿವಿಧಾನಗಳು ಹಾಡುಗಳು ಇಂದು ಬಹುತೇಕವಾಗಿ ಕಣ್ಮರೆಯಾಗಿರುವುದು ಕಂಡುಬಂದಿದೆ. ಹಿಂದೆ ಮದುವೆಗಳು ಗಂಡಿನ ಮನೆಯಲ್ಲೇ ನಡೆಯುತ್ತಿದ್ದುದರಿಂದ ವಿಧಿವಿಧಾನಗಳು ಇದ್ದವು. ಆದರೆ ಇಂದು ಕುಡುಬಿಯರ ಮದುವೆಗಳು ದೇವಸ್ಥಾನಗಳಲ್ಲಿ ಇರುವ ಕಲ್ಯಾಣ ಮಂಟಪಗಳಲ್ಲಿ ನಡೆಯುವುದರಿಂದ ಹಿಂದಿನ ಯಾವುದೇ ವಿಧಿಗಳು ಆಚರಣೆಯಲ್ಲಿಲ್ಲ. ಇಂದು ಕುಡುಬಿಯರು ತಮ್ಮ ಮದುವೆಗಳಲ್ಲಿ ಮದುವೆ ಹಾಡುಗಳನ್ನು ಹಾಡುವುದೇ ಇಲ್ಲ. ಇಂದಿನ ಸಂದರ್ಭದಲ್ಲಿ ಇವರ ವಿವಾಹಗಳಲ್ಲಿ ಬುಡಕಟ್ಟು ಜನಾಂಗ ಸ್ವರೂಪ ಉಳಿದುಕೊಳ್ಳದೆ ವೈದಿಕ ಸಂಪ್ರದಾಯ ಪ್ರಧಾನವಾಗಿಬಿಟ್ಟಿದೆ.

ಹೀಗಾಗಿ, ಭಾರತೀಯ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿ ವಿಶಿಷ್ಟ ಸಂಸ್ಕೃತಿಯನ್ನು ಹೊಂದಿದ್ದ ಕುಡುಬಿಯರ ಮದುವೆಸಂಬಂಧಿ ಆಚರಣೆಗಳು ಮತ್ತು ಮದುವೆ ಹಾಡುಗಳು ಸಂಪೂರ್ಣವಾಗಿ ನಾಶವಾಗುವ ಮೊದಲೇ ಸಾಧ್ಯವಾದಷ್ಟು ಅವುಗಳನ್ನು ಗುರುತಿಸಿ, ಸಂಗ್ರಹಿಸಿ, ದಾಖಲಿಸಿ, ಲಿಪೀಕರಣಗೊಳಿಸಿ ವಿಶ್ಲೇಷಿಸುವ ಕೆಲಸ ಮಾಡಬೇಕಾಗಿದೆ. ಹೀಗಾಗಿ 'ಕುಡುಬಿಯರ ಮದುವೆ ಹಾಡುಗಳು' ಎನ್ನುವ ವಿಷಯದ ಕುರಿತಾಗಿ ಅಧ್ಯಯನ ನಡೆಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಈ ಹಿಂದೆ ತಿಳಿಸಿರುವಂತೆ, ಹದಿನಾರನೇ ಶತಮಾನದಲ್ಲಿ ಮತಾಂತರಕ್ಕೆ ಹೆದರಿಕೊಂಡು ಗೋವೆಯಿಂದ ಕರಾವಳಿ ಕರ್ನಾಟಕಕ್ಕೆ ವಲಸೆ ಬಂದ ಕುಡುಬಿಯರು ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಾಸ ಮಾಡುತ್ತಿದ್ದಾರೆ. ೧೯೮೪ರಲ್ಲಿ ನಡೆಸಿದ ಸಮೀಕ್ಷೆಯ ಪ್ರಕಾರ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇವರ ಸಂಖ್ಯೆ ೨೩,೮೪೭ ಇದ್ದು ಕರ್ನಾಟಕದಲ್ಲಿ ಸುಮಾರು ಐವತ್ತು ಸಾವಿರ ಎಂದು ಅಂದಾಜಿಸಲಾಗಿದೆ.

ಕುಡುಬಿಯರ ಬಗ್ಗೆ ಈಗಾಗಲೆ ಅಧ್ಯಯನ ಮಾಡಿದ ಡಾ। ವೈ. ರವೀಂದ್ರನಾಥ ರಾವ್ ಹಾಗೂ ಪ್ರೊ। ಎ. ವಿ. ನಾವಡ ಅವರ ಗ್ರಂಥಗಳಲ್ಲಿ ದೊರಕುವ ಮಾಹಿತಿಯ ಆಧಾರದಲ್ಲಿ ಹೇಳುವುದಾದರೆ ಕುಡುಬಿಯರಲ್ಲಿ ಆರು ಪಂಗಡಗಳಿವೆ. ಈ ಆರು ಪಂಗಡಗಳಲ್ಲಿ ಒಟ್ಟು ೧೩೦ ಬಳಿಗಳಿವೆ. ನನ್ನ ಅಧ್ಯಯನ ವ್ಯಾಪ್ತಿಯೊಳಗಡೆ ನಾನು ಮುಖ್ಯವಾಗಿ ಉಡುಪಿ ಜಿಲ್ಲೆಯಲ್ಲಿ ನೆಲೆಸಿರುವ ಗೋವಾ ಕುಡುಬಿಯರನ್ನು ಮಾತ್ರ ಮುಖ್ಯ ವಕ್ತೃಗಳಾಗಿಟ್ಟುಕೊಂಡು ಅವರಿಂದ ಮದುವೆ ಸಂಬಂಧಿ ಮಾಹಿತಿಗಳನ್ನು ಮತ್ತು ಹಾಡುಗಳನ್ನು ಸಂಗ್ರಹಿಸಿದ್ದೇನೆ.

ಪ್ರಸ್ತುತ ಅಧ್ಯಯನಕ್ಕೆ ಉಡುಪಿ ಜಿಲ್ಲೆಯ ಬ್ರಹ್ಮಾವರದ ಯೆಡ್ತಾಡಿ, ಕೊಕ್ಕರ್ಣೆ, ಬೆನೆಗಲ್, ಒಳಬೈಲು, ಅಂಡಾರ್ಕಟ್ಟೆ, ಹೆಬ್ರಿಯ ಕುಸುಪಿನ ತೋಟ ಪ್ರದೇಶಗಳಲ್ಲಿ ಹೆಚ್ಚಾಗಿ ನೆಲೆಸಿರುವ ಗೋವಾ ಕುಡುಬಿಯರನ್ನು ವಕ್ತೃಗಳನ್ನಾಗಿ ಇಟ್ಟುಕೊಳ್ಳಲಾಗಿದೆ.

## ಅಧ್ಯಯನದ ಸ್ವರೂಪ ಮತ್ತು ವಿಧಾನ

ಪ್ರಸ್ತುತ ಅಧ್ಯಯನವನ್ನು ಉಪಲಬ್ಧವಿರುವ ಗ್ರಾಂಥಿಕ ಮತ್ತು ಮೌಖಿಕ ಮಾಹಿತಿಗಳ ಆಧಾರದಿಂದ ಕೈಗೊಳ್ಳಲಾಗಿದೆ. ನನ್ನ ಅಧ್ಯಯನ ಮುಖ್ಯವಾಗಿ ಕ್ಷೇತ್ರಕಾರ್ಯವನ್ನೇ ಆಧರಿಸಿ ಕೊಂಡಿರುವುದರಿಂದ ವಕ್ತೃಗಳ ಮಾಹಿತಿಗಳಿಗೆ ಈ ಪ್ರಬಂಧದಲ್ಲಿ ಹೆಚ್ಚು ಒತ್ತನ್ನು ನೀಡಲಾಗಿದೆ. ಇಲ್ಲಿಯ ಅಧ್ಯಯನವ್ಯಾಪ್ತಿಗೆ ಒಳಪಟ್ಟ ಮೇಲೆ ಸೂಚಿಸಿದ ಪ್ರದೇಶಗಳಲ್ಲಿ ಕ್ಷೇತ್ರಕಾರ್ಯ ನಡೆ

ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ನನ್ನ ಅಧ್ಯಯನಕ್ಕೆ ಸಂಬಂಧಿಸಿದಂತೆ ಮದುವೆ ಹಾಡುಗಳನ್ನು ಸಂಗ್ರಹಿಸಲು ಸುಮಾರು ೪೦ರಿಂದ ೮೦ ವರ್ಷ ಪ್ರಾಯದೊಳಗಿನ ಕುಡುಬಿ ಗಂಡಸರು ಮತ್ತು ಹೆಂಗಸರು ನನಗೆ ಮಾಹಿತಿದಾರರಾಗಿ ಸಹಕರಿಸಿದ್ದಾರೆ. ಮದುವೆ ಹಾಡುಗಳನ್ನು ಹೆಚ್ಚಾಗಿ ಹೆಂಗಸರು ಹಾಡುವುದಾದರೂ ಗಂಡಸರಿಂದಲೂ ಹಾಡಿಸಿ ದಾಖಲಿಸಿಕೊಳ್ಳಲಾಗಿದೆ.

ಕ್ಷೇತ್ರಕಾರ್ಯ ನಡೆಸುವ ಸಂದರ್ಭದಲ್ಲಿ ಪ್ರಶ್ನಾವಳಿಯೊಂದನ್ನು ಸಿದ್ಧಪಡಿಸಿ ಅದರಂತೆ ಮಾಹಿತಿದಾರರಲ್ಲಿ ಪ್ರಶ್ನೆಗಳನ್ನು ಕೇಳಿದ್ದರೂ ಸಾಂದರ್ಭಿಕವಾಗಿ ಕೂಡ ಪ್ರಶ್ನೆಗಳನ್ನು ಕೇಳಿ ಮಾಹಿತಿ ಸಂಗ್ರಹ ಮಾಡಲಾಗಿದೆ ಹಾಗೂ ಮಾಹಿತಿಸಂಗ್ರಹವು ಸಂವಾದರೂಪದಲ್ಲಿರುವಂತೆ ಸಾಧ್ಯವಾದಷ್ಟು ಮಟ್ಟಿಗೆ ಎಚ್ಚರ ವಹಿಸಲಾಗಿದೆ. ಮಾಹಿತಿಗಳನ್ನು ಸಂಗ್ರಹಿಸುವಾಗ ಇತ್ತೀಚೆಗಿನ ಜಾನಪದ ಅಧ್ಯಯನ ವಿಧಾನದಂತೆ ವಕ್ತೃಗಳನ್ನು ಸಂಶೋಧನ ಭಾಗಿಗಳು ಎಂದು ಪರಿಗಣಿಸಿ ಅವರ ಅಭಿಪ್ರಾಯಗಳನ್ನು ಸಾಂದರ್ಭಿಕವಾಗಿ ಬಳಸಿಕೊಳ್ಳಲಾಗಿದೆ. ಹಾಡುಗಳ ದಾಖಲೀಕರಣ ಸಂದರ್ಭದಲ್ಲಿ ವಕ್ತೃಗಳನ್ನು ಮತ್ತೆ ಮತ್ತೆ ಭೇಟಿ ಮಾಡಿ ಚರ್ಚಿಸಿ ಈ ಮಾಹಿತಿಗಳಿಗೆ ಅಧಿಕೃತತೆ ಬರುವಂತೆ ಎಚ್ಚರ ವಹಿಸಲಾಗಿದೆ. ಅಲ್ಲದೆ ಮಾಹಿತಿಗಳನ್ನು ನೀಡಿದ ಮಾಹಿತಿದಾರರ ಅಭಿಪ್ರಾಯಗಳಿಗೆ ಈ ಪ್ರಬಂಧದಲ್ಲಿ ಆದ್ಯತೆ ನೀಡಲಾಗಿದೆ.

ಕ್ಷೇತ್ರಕಾರ್ಯದ ಮೂಲಕ ಮಾಹಿತಿಗಳನ್ನು ಸಂಗ್ರಹಿಸುವಾಗ ಅವರ ಬಾಯಿಯಿಂದ ಹೊರಡುವ ಪ್ರತಿಯೊಂದು ಶಬ್ದಗಳನ್ನು ದಾಖಲಿಸಿಕೊಳ್ಳಲು ಟೇಪ್ ರೆಕಾರ್ಡರನ್ನು ಬಳಸಿಕೊಳ್ಳಲಾಗಿದೆ. ಕೆಮರಾದ ಮೂಲಕ ಛಾಯಾಚಿತ್ರಗಳನ್ನು ತೆಗೆಯಲಾಗಿದೆ. ಬಹಳ ನಾಚಿಕೆ, ಸಂಕೋಚ ಸ್ವಭಾವದ ಕುಡುಬಿಯರನ್ನು ಮಾಹಿತಿ ನೀಡುವಂತೆ ಅವರನ್ನು ತಯಾರಿ ಮಾಡುವುದೇ ದೊಡ್ಡ ಸಾಹಸದ ಕೆಲಸ. ಪರಿಪರಿಯಾಗಿ ಕಾಡಿಬೇಡಿದರೂ ಮಾಹಿತಿಗಳನ್ನು ನೀಡಲು ಹಿಂಜರಿಯುತ್ತಿದ್ದರು. ಇಂತಹ ಸಮಯದಲ್ಲಿ ನಮ್ಮ ಪ್ರಯತ್ನವನ್ನು ಬಿಡದೆ ಪದೇ ಪದೇ ಆ ಪ್ರದೇಶಗಳಿಗೆ ಭೇಟಿ ನೀಡಿ ಅವರಲ್ಲಿ ಆತ್ಮೀಯತೆಯನ್ನು ಬೆಳೆಸಿ ಅವರ ಮನೆಗಳಲ್ಲಿ ಉಳಿದು ಸುಮಾರು ಹದಿನೈದು ಮದುವೆ ಹಾಡುಗಳನ್ನು ಸಂಗ್ರಹಿಸಿದ್ದೇನೆ. ಸಂಗ್ರಹಿಸಿದ ಹಾಡುಗಳು ಕುಡುಬಿಕೊಂಕಣಿ ಭಾಷೆಯಲ್ಲಿರುವುದರಿಂದ ಈ ಪ್ರಬಂಧಕ್ಕೆ ಒಳಪಡುವಂತೆ ಕನ್ನಡದಲ್ಲಿ ನಿರೂಪಿಸಲು ಅವರಲ್ಲಿ ವಿದ್ಯಾವಂತರಾದವರಿಂದ ಅನುವಾದ ಮಾಡುವಲ್ಲಿ ಸಹಾಯವನ್ನು ಪಡೆದುಕೊಳ್ಳಲಾಗಿದೆ. ಕುಡುಬಿಯರ ಮದುವೆಯ ವಿಧಿವಿಧಾನಗಳನ್ನು ದಾಖಲಿಸಿಕೊಳ್ಳಲು ಅವರ ಎರಡು ಮದುವೆ ಸಮಾರಂಭಗಳಲ್ಲಿ ಭಾಗಿಯಾಗಿ ಕ್ಷೇತ್ರಕಾರ್ಯವನ್ನು ನಡೆಸಲಾಗಿದೆ. ಈ ಸಂದರ್ಭದಲ್ಲಿ ಅಧ್ಯಯನಕ್ಕೆ ಪೂರಕವಾದ ಛಾಯಾಚಿತ್ರಗಳನ್ನು ತೆಗೆದು ಕೊಳ್ಳಲಾಗಿದೆ. (ನೋಡಿ: ಅನುಬಂಧ – ೧).

ಕ್ಷೇತ್ರಕಾರ್ಯದಲ್ಲಿ ಕಲೆಹಾಕಿದ ಮಾಹಿತಿಗಳನ್ನು ಈ ಕೆಳಗಿನಂತೆ ವಿಶ್ಲೇಷಣೆಗೊಳಪಡಿಸಿ, ಒಟ್ಟು ಐದು ಅಧ್ಯಾಯಗಳಲ್ಲಿ ವಿಂಗಡಿಸಿ ಕೊಡಲಾಗಿದೆ:

**ಅಧ್ಯಾಯ – ೧:**

ಇದರಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ, ಅಧ್ಯಯನದ ಸ್ವರೂಪ ಮತ್ತು ವಿಧಾನ ಹಾಗೂ ಈವರೆಗೆ ಕುಡುಬಿಯರ ಕುರಿತು ನಡೆದ ಅಧ್ಯಯನಗಳ ಸಮೀಕ್ಷೆ.

**ಅಧ್ಯಾಯ – ೨:**

ಕುಡುಬಿ ಜನಾಂಗದ ಪರಿಚಯ, ಕುಡುಬಿಯರ ಮೂಲ, ಕುಡುಬಿಯರ ಭಾಷೆ, ಕುಡುಬಿ ಪದನಿಷ್ಪತ್ತಿ, ವೃತ್ತಿ ಮತ್ತು ಆಹಾರ ಪದ್ಧತಿ, ಉಡುಗೆತೊಡುಗೆಗಳು, ವಸತಿ, ಕುಟುಂಬ ವ್ಯವಸ್ಥೆ, ನ್ಯಾಯತೀರ್ಮಾನಗಳು ಇತ್ಯಾದಿ.

**ಅಧ್ಯಾಯ – ೩:**

ಇದರಲ್ಲಿ ಕುಡುಬಿಯರ ಮದುವೆಸಂಬಂಧಿ ಆಚರಣೆಗಳು ಮತ್ತು ಮದುವೆ ಹಾಡುಗಳು. ಇವುಗಳಲ್ಲಿ ಅಧ್ಯಯನಕ್ಕೆ ಅನುಗುಣವಾಗಿ ಮೂರು ಉಪವಿಭಾಗಗಳನ್ನು ಮಾಡಲಾಗಿದೆ.

**ಅಧ್ಯಾಯ – ೪:**

ಕುಡುಬಿಯರ ಮದುವೆ ಹಾಡುಗಳಲ್ಲಿ ವ್ಯಕ್ತವಾಗುವ ಲೋಕದೃಷ್ಟಿಯ ಬಗೆಗೆ ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

**ಅಧ್ಯಾಯ – ೫:**

ಉಪಸಂಹಾರ.

ಈ ಅಧ್ಯಯನ ಸಂದರ್ಭದಲ್ಲಿ, ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿಗಳ ಜೊತೆಗೆ ಮುದ್ರಿತ ಪತ್ಯಮೂಲಗಳಿಂದ ದೊರೆತ ಅವಶ್ಯ ಮಾಹಿತಿಗಳನ್ನೂ ಪೂರಕವಾಗಿ ಬಳಸಿಕೊಂಡು ಅಧ್ಯಯನವಿಷಯಕ್ಕೆ ಹೆಚ್ಚು ಅಧಿಕೃತತೆ ಬರುವಂತೆ ಎಚ್ಚರವಹಿಸಲಾಗಿದೆ.

## ಈ ವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ:

ಕುಡುಬಿಯರನ್ನು ಕುರಿತು ಈ ವರೆಗೆ ಹೆಚ್ಚಿನ ಅಧ್ಯಯನಗಳು ನಡೆದಿಲ್ಲವೆಂದೇ ಹೇಳಬಹುದು. ಅನೇಕ ಆಸಕ್ತ ಸಂಶೋಧಕರು ಕುಡುಬಿಯರ ಬದುಕಿನ ಮೇಲೆ ಬೆಳಕು ಚೆಲ್ಲುವಂತಹ ಕೆಲವೊಂದು ವಿಷಯಗಳನ್ನು ಸಂಗ್ರಹಿಸಿ, ದಾಖಲಿಸಿಕೊಂಡಿದ್ದಾರೆ ಮತ್ತು ಕೆಲವನ್ನು ಪ್ರಕಟನೆಗಳ ಮೂಲಕ

ಹೊರತಂದಿದ್ದಾರೆ. ೧೯೭೩ರಲ್ಲಿ ಕರ್ನಾಟಕ ಸರಕಾರ ಪ್ರಕಟಿಸಿರುವ, ಕೆ. ಅಭಿಶಂಕರ್ ಸಂಪಾದಕ ರಾಗಿರುವ 'ಸೌತ್ ಕೆನರಾ ಡಿಸ್ಟ್ರಿಕ್ಟ್ ಗಜೆಟಿಯರ್'ನಲ್ಲಿ ಕುಡುಬಿಯರ ಜೀವನ ಕ್ರಮ ಮತ್ತು ಸಂಸ್ಕೃತಿಯ ಕುರಿತ ವಿವರಗಳು ದೊರೆಯುತ್ತವೆ.

೧೯೦೯ರಲ್ಲಿ ಪ್ರಕಟವಾದ ಎಡ್ಗರ್ ಥರ್ಸ್ಟನ್ ಎನ್ನುವ ವಿದ್ವಾಂಸ ತನ್ನ ಕೃತಿ, 'ಕಾಸ್ಟ್ಸ್ ಎಂಡ್ ಟ್ರೈಬ್ಸ್ ಆಫ್ ಸದರ್ನ್ ಇಂಡಿಯಾ'ದಲ್ಲಿ ದಕ್ಷಿಣ ಭಾರತದ ಬೇರೆಬೇರೆ ಜಾತಿ ಮತ್ತು ಬುಡಕಟ್ಟು ಜನಾಂಗಗಳ ಅಧ್ಯಯನವನ್ನು ಮಾಡಿದ್ದಾರೆ. ಅದರಲ್ಲಿ ಕುಡುಬಿಯರ ಕುರಿತ ಬಹಳಷ್ಟು ಮಾಹಿತಿಗಳು ದೊರೆಯುತ್ತವೆ. ನೂರು ವರ್ಷಗಳ ಹಿಂದೆ ಕುಡಿಬಿಯರ ಬದುಕಿನ ರೀತಿನೀತಿಗಳನ್ನು ತನ್ನ ದೃಷ್ಟಿಕೋನದಿಂದಲೇ ದಾಖಲಿಸಿಕೊಂಡಿದ್ದಾನೆ.

೧೯೮೩ರಲ್ಲಿ ಪ್ರಕಟವಾದ ಈಶ್ವರ್ ಎಸ್. ಜೋಶಿ ಅವರ 'ದಕ್ಷಿಣ ಕನ್ನಡದ ಕುಡುಬಿಯರು' ಎನ್ನುವ ಪುಸ್ತಕದಲ್ಲಿ ಕುಡುಬಿಯರ ಕುರಿತು ಮಾಹಿತಿಗಳು ದೊರೆಯುತ್ತವೆ. ಕುಡುಬಿಯರು ಗೋವಾ ಪ್ರದೇಶದ ಮೂಲ ನಿವಾಸಿಗಳೆಂದೂ ಅಲ್ಲಿ ಮತಾಂತರಕ್ಕೆ ಹೆದರಿಕೊಂಡು ಕರ್ನಾಟಕದ ಕರಾವಳಿ ಪ್ರದೇಶದ ದಟ್ಟವಾದ ಕಾಡುಗಳಿಗೆ ಬಂದು ನೆಲೆಸಿದರೆಂದೂ ತಿಳಿಸಿದ್ದಾರೆ. ಅವರ ಆಡುಭಾಷೆ ಕಾಡುಕೊಂಕಣಿಯಾಗಿದೆ ಎಂದಿದ್ದಾರೆ. ಕುಡುಬಿಯರ ವೇಷಭೂಷಣ, ಧಾರ್ಮಿಕ ಸಂಪ್ರದಾಯಗಳು, ಜೀವನಾವರ್ತನ ಆಚರಣೆಗಳು, ಆಹಾರ, ವಸತಿ, ಸಾಕುಪ್ರಾಣಿಗಳು, ಆರ್ಥಿಕ ಜೀವನಕ್ರಮ, ಉದ್ಯೋಗ, ಮೂಢನಂಬಿಕೆಗಳು, ಮನೋರಂಜನೆ, ವಿದ್ಯಾಭ್ಯಾಸ ಈ ಕುರಿತ ಮಾಹಿತಿಗಳನ್ನು ನೀಡಿದ್ದಾರೆ. ಕುಡುಬಿಯರ ಮದುವೆಯ ಬಗ್ಗೆ ಅಲ್ಲಿ ಕೆಲವು ವಿಷಯಗಳನ್ನು ಸಂಕ್ಷಿಪ್ತವಾಗಿ ನಿರೂಪಿಸಿ, ಜೊತೆಗೆ ಎರಡು ಹಾಡಿನ ತುಣುಕುಗಳನ್ನು ನೀಡಿದ್ದಾರೆ. ಕುಡುಬಿಯರ ಮದುವೆಯ ಬಗೆಗಾಗಲಿ, ಅವರ ಹಾಡುಗಳ ಬಗೆಗಾಗಲಿ ಇಲ್ಲಿ ವಿಸ್ತೃತವಾದ ಮಾಹಿತಿ ದೊರಕುವುದಿಲ್ಲ.

೧೮೯೫ರಲ್ಲಿ ಪ್ರಕಟವಾದ ಸುಬ್ರಾಯ ಹೆಗಡೆಯವರ 'ಅಟ್ಟೆ ಕುಣಬಿಗಳು' ಎನ್ನುವ ಕೃತಿ ಕ್ಷೇತ್ರಾಧ್ಯಯನದ ಮೂಲಕ ಸಂಗ್ರಹಿಸಿದ ಮಾಹಿತಿಗಳನ್ನು ಒಳಗೊಂಡಿದೆ. ಅಟ್ಟೆ ಕುಣಬಿಗಳು ಗೋವಾದಿಂದ ಬಂದು ಉತ್ತರ ಕನ್ನಡದ ಕಾಡುಗಳಲ್ಲಿ ವಾಸಮಾಡತೊಡಗಿದರು. ಇವರು ವಾಸಿಸುವ ಮನೆಗಳನ್ನು ಕೊಪ್ಪ ಎಂದು ಹೇಳುತ್ತಾರೆಂಬ ಮಾಹಿತಿಯನ್ನು ನೀಡಿದ್ದಾರೆ. ಕುಣಬಿಯರ ಬೇಸಾಯ ವೃತ್ತಿ ಬೇಟೆಯಾಡುವುದು, ಉಡುಗೆತೊಡುಗೆಗಳ ವಿವರ ಇವರ ಲೇಖನದೊಳಗೆ ಸಂಕ್ಷಿಪ್ತವಾಗಿ ಮೂಡಿಬಂದಿದೆ. ಅಟ್ಟೆಕುಣಬಿಗಳು ಜನಿವಾರ ಧರಿಸುತ್ತಾರೆ, ಇವರು ನೂಲಹುಣ್ಣಿಮೆಯನ್ನು ಆಚರಿಸುತ್ತಾರೆ, ಹೋಳಿ ಹಬ್ಬದಲ್ಲಿ ಗುಮಟೆ ಬಾರಿಸಿ ಸುಗ್ಗಿಕುಣಿತವನ್ನು ಕುಣಿಯುತ್ತಾರೆ ಎನ್ನುವ ಮಾಹಿತಿಗಳು ದೊರೆಯುತ್ತವೆ. ಮದುವೆಯ ಬಗ್ಗೆ ಅತ್ಯಂತ ಸಂಕ್ಷಿಪ್ತವಾದ ಮಾಹಿತಿಯನ್ನು ನೀಡಿದ್ದಾರೆ.

೧೯೮೯ರಲ್ಲಿ ಪ್ರಕಟವಾದ ಪ್ರೊ। ಎ. ವಿ. ನಾವಡ ಅವರ ರಾಜ್ಯ ಸಂಪನ್ಮೂಲ ಕೇಂದ್ರ, ಮೈಸೂರಿನವರು ಪ್ರಕಟಿಸಿರುವ 'ಕುಡುಬಿಯರು' ಎನ್ನುವ ಪುಸ್ತಕ ವಯಸ್ಕರ ಶಿಕ್ಷಣಕ್ಕಾಗಿ ಪಠ್ಯವಾಗಿ ಪ್ರಕಟಗೊಂಡಿದ್ದು ಇವರಲ್ಲಿ ಕುಡುಬಿಯರ ಕುರಿತ ವಿವರಗಳು ದೊರೆಯುತ್ತವೆ. ಕುಡುಬಿಯರು ಗೋವೆಯಿಂದ ಬಂದವರೆಂದು, ಮೈತುಂಬಾ ಆಭರಣದ ಚೆಲುವೆಯರೆಂದು, ಕುಡುಬಿಯರಲ್ಲಿ ಅನೇಕ ಒಳಪಂಗಡಗಳಿವೆಯೆಂದು, ಎಲ್ಲರೂ ಒಟ್ಟಾಗಿ ಒಂದೇ ಮನೆಯಲ್ಲಿ ವಾಸಿಸುವರೆಂದು ಅವರ ಆಚರಣೆಗಳಲ್ಲಿ ಮುಖ್ಯವಾದ ಹೋಳಿಹಬ್ಬದ ಕುರಿತಾದ ಮಾಹಿತಿಗಳನ್ನು ಕೊಡುತ್ತಾರೆ. ಕೊಟ್ಟ ಹೆಣ್ಣು ಕುಲಕ್ಕೆ ಹೊರಗು ಎಂದು ಹೇಳುತ್ತಾ ಕುಡುಬಿಯರ ಮದುವೆಸಂಬಂಧಿ ಸಂಪ್ರದಾಯಗಳನ್ನು ಸಂಕ್ಷಿಪ್ತವಾಗಿ ನೀಡಿದ್ದಾರೆ.

ಡಾ। ವೈ. ರವೀಂದ್ರನಾಥ ರಾವ್ ಅವರು ಕುಡುಬಿಯರ ಕುರಿತು ಸಮಾಜಶಾಸ್ತ್ರೀಯವಾಗಿ, ಆಳವಾಗಿ ಅಧ್ಯಯನ ಮತ್ತು ಸಂಶೋಧನೆ ನಡೆಸಿದ ಮೊದಲ ವ್ಯಕ್ತಿಯಾಗಿದ್ದಾರೆ. ಅವರು ತಮ್ಮ ಪ್ರಕಟಿತ ಸಂಶೋಧನಾತ್ಮಕ ಕೃತಿ 'ಟ್ರೈಬಲ್ ಟ್ರೆಡಿಶನ್ ಎಂಡ್ ಚೇಂಜ್ – ಎ ಸ್ಟಡಿ ಆಫ್ ಕಡುಬಿಸ್ ಆಫ್ ಸೌತ್ ಇಂಡಿಯಾ' (೨೦೦೬)ದಲ್ಲಿ ಕುಡುಬಿಯರ ಸಮಾಜರಚನೆ, ಸಂಸ್ಥೆಗಳು, ಜೀವನಕ್ರಮ, ಸಂಪ್ರದಾಯ, ಆಚಾರವಿಚಾರಗಳು, ಬದಲಾವಣೆಗಳು ಹಾಗೂ ಅವರ ಅನೇಕ ಸಮಸ್ಯೆಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿದ್ದಾರೆ. ಅಲ್ಲದೆ, ಅವರ ಸಮಸ್ಯೆಗಳ ಪರಿಹಾರಕ್ಕಾಗಿ ಸರಕಾರಕ್ಕೆ ಮತ್ತು ಆಡಳಿತೆದಾರರಿಗೆ ಅನೇಕ ಶಿಫಾರಸುಗಳನ್ನು ಈ ಸಂಶೋಧನ ಕೃತಿಯಲ್ಲಿ ಸೂಚಿಸಿದ್ದಾರೆ. ಈ ಕೃತಿಯಲ್ಲಿ ಕುಡುಬಿಯರ ಮದುವೆಸಂಬಂಧಿ ವಿಚಾರಗಳನ್ನು ಸಮಾಜಶಾಸ್ತ್ರೀಯ ಹಿನ್ನೆಲೆಯೊಂದಿಗೆ ಸಾಕಷ್ಟು ವಿಸ್ತೃತವಾಗಿ ನೀಡಿದ್ದಾರೆ.

೨೦೦೦ದಲ್ಲಿ ಪ್ರಕಟಗೊಂಡ ಡಾ। ಜೆರಾಲ್ಡ್ ಪಿಂಟೋ ಅವರ 'ಕುಡ್ಮಿ ಕೊಂಕ್ಣಿ ಲೋಕವೇದ್' ಎನ್ನುವ ಕಿರುಹೊತ್ತಗೆಯು ಕ್ರಿಶ್ಚಿಯನ್ ಕೊಂಕಣಿ ಭಾಷೆಯಲ್ಲಿ ಪ್ರಕಟಗೊಂಡಿದ್ದು, ಇವರಲ್ಲಿ ಕುಡುಬಿಯರ ಭಾಷೆ, ಬಳಿಗಳು, ಆಹಾರಪದ್ಧತಿ, ಉಡುಗೆತೊಡುಗೆ, ಆಭರಣಗಳು, ಆಚರಣೆಗಳು ಹಾಗೂ ಬೇರೆ ಬೇರೆ ಜಾನಪದ ಕುಣಿತಗಳ ವಿವರಗಳು ದೊರಕುತ್ತವೆ. 'ತೀಸ್ರೊ ಅವಸರ್' ಎನ್ನುವ ಅಧ್ಯಾಯದಲ್ಲಿ ಮದುವೆಗೆ ಸಂಬಂಧಿಸಿದಂತೆ ಅಲ್ಪಸ್ವಲ್ಪ ಮಾಹಿತಿಗಳು ಲಭ್ಯವಿವೆ.

ಕುಡುಬಿ ಸಮಾಜೋದ್ಧಾರಕ ಸಂಘ (ರಿ.) ೨೦೦೫ ಅಲ್ತಾರು–ಯಡ್ತಾಡಿ ಉಡುಪಿ ಜಿಲ್ಲೆ ಇವರು ಪ್ರಕಟಿಸಿರುವ 'ಕುಡುಬಿ ಬುಡಕಟ್ಟು ಜನಾಂಗ ಒಂದು ಕಿರುಪರಿಚಯ' ಎನ್ನುವ ಪುಸ್ತಕದಲ್ಲಿ ಡಾ। ವೈ. ರವೀಂದ್ರನಾಥ ರಾವ್ ಇವರು ಬರೆದಿರುವ ಒಂದು ಲೇಖನವು ದೊರೆಯುತ್ತದೆ. ಇದರಲ್ಲಿ ಕುಡುಬಿಯರು ಬುಡಕಟ್ಟು ವರ್ಗಕ್ಕೆ ಸೇರಿದವರೆಂದೂ ಅವರನ್ನು ಕರ್ನಾಟಕ ಸರಕಾರ ಇನ್ನೂ ಆ ವರ್ಗಕ್ಕೆ ಸೇರಿಸಿಕೊಳ್ಳದಿರುವುದರಿಂದ ಸರಕಾರದಿಂದ ದೊರೆಯುವ ಸವಲತ್ತುಗಳಿಂದ ವಂಚಿತರಾಗಿರುವ ಬಗ್ಗೆ ನೋವನ್ನು ವ್ಯಕ್ತಪಡಿಸಿದ್ದಾರೆ. ಅವರನ್ನು ಸರಕಾರ ಪರಿಶಿಷ್ಟ ವರ್ಗ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿಸಿಕೊಳ್ಳಬೇಕು. ಇದಕ್ಕಾಗಿ ಸಮಾಜದ ಧುರೀಣರು, ಪ್ರತಿನಿಧಿಗಳು ಹಾಗೂ ಸರಕಾರ ಮುಖ್ಯ ಜವಾಬ್ದಾರಿಯಾಗಿದೆ ಎಂದಿದ್ದಾರೆ.

೨೦೦೮ರಲ್ಲಿ ಕರ್ನಾಟಕ ಸರಕಾರ ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ ವತಿಯಿಂದ ಪ್ರಕಟವಾದ ಸಂಯುಕ್ತಗ್ರಂಥದಲ್ಲಿ ಪ್ರೊ। ಎ. ಪಿ. ನಾವಡರ 'ಕೊಂಕಣದ ಕುಡುಬಿಯರು' ಎನ್ನುವ ಶೀರ್ಷಿಕೆಯ ಭಾಗದಲ್ಲಿ ಕನ್ನಡ ಭಾಷೆಯಲ್ಲಿ ಕುಡುಬಿಯರ ಬದುಕನ್ನು ಸಮಗ್ರವಾಗಿ ದಾಖಲಿಸಿದುದರ ಜೊತೆಗೆ ಅವರ ಮೌಖಿಕ ಪರಂಪರೆಯ ಸಾಹಿತ್ಯವನ್ನು ಕೂಡ ಉಲ್ಲೇಖಿಸಿದ್ದಾರೆ. ಅದೇ ಗ್ರಂಥದ ಇನ್ನೊಂದು ಮಗ್ಗುಲಲ್ಲಿ ಡಿ. ಪಿ. ಪ್ರಕಾಶ್ ಅವರು ಸಂಗ್ರಹಿಸಿದ 'ಕುಡ್ಮಿ ಜಾನಪದ್ ಸಂಗ್ರಹ್' ಎನ್ನುವ ಭಾಗದಲ್ಲಿ ಕುಡುಬಿಯರ ಲೋಕವನ್ನು ಒಂದು ಜಾನಪದೀಯ ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಇವರಿಬ್ಬರ ಬರವಣಿಗೆಯಲ್ಲಿ ಮದುವೆಗೆ ಸಂಬಂಧಪಟ್ಟಂತೆ ಹೆಚ್ಚಿನ ಮಾಹಿತಿಗಳು ದೊರೆಯುತ್ತವೆ. ಡಿ. ಪಿ. ಪ್ರಕಾಶ್ ಅವರ ಬರವಣಿಗೆಯಲ್ಲಿ ಮದುವೆಗೆ ಸಂಬಂಧಿಸಿದ ಹಾಡುಗಳು ಕೆಲವು ದೊರೆಯುತ್ತವೆ. ಆದರೆ ಅವರು ಸಂಗ್ರಹಿಸಿದ ಈ ಮದುವೆ ಹಾಡುಗಳು ಮಂಗಳೂರು ಪ್ರದೇಶದ ಕುಡುಬಿಯರಿಗೆ ಸಂಬಂಧಿಸಿದ ಕಾರಣ ಈ ಅಧ್ಯಯನ ವ್ಯಾಪ್ತಿಯಲ್ಲಿ ಎಲ್ಲಿಯೂ ಇವುಗಳನ್ನು ಹಾಡುವುದು ನನ್ನ ಗಮನಕ್ಕೆ ಬಂದಿಲ್ಲ ಹಾಗೂ ಇದನ್ನು ಈ ಪ್ರಬಂಧದಲ್ಲಿ ಎಲ್ಲಿಯೂ ಬಳಸಿಕೊಂಡಿಲ್ಲ.

ಇದಲ್ಲದೆ, ಕುಡುಬಿಯರ ಕುರಿತು ಪತ್ರಿಕೆಗಳಲ್ಲಿ ಕೆಲವೊಂದು ಲೇಖನಗಳು ಪ್ರಕಟಗೊಂಡಿವೆ. ಭಂಡಾರ್‌ಕಾರ್ಸ್ ಕುಂದಾಪುರ ಹಾಗೂ ಮಿಲಾಗ್ರಿಸ್ ಕಾಲೇಜಿನ ವಾರ್ಷಿಕಾಂಕಗಳಲ್ಲಿ ವಿದ್ಯಾರ್ಥಿಗಳಿಂದ ಕುಡುಬಿಯರ ಕುರಿತು ಎರಡು ಲೇಖನಗಳು ಪ್ರಕಟಗೊಂಡಿವೆ.

ಭಂಡಾರ್‌ಕಾರ್ಸ್ ಕಾಲೇಜು, ಕುಂದಾಪುರದ ರಜತ ಮಹೋತ್ಸವ ಸ್ಮರಣಸಂಚಿಕೆ – ೧೯೮೮ ಇದರಲ್ಲಿ 'ನಮ್ಮ ಸುತ್ತಿನ ಮದುವೆ ತವರಿನ ಕಟ್ಟು ಕಡಿಯುವ ಕುಡುಬಿ ವಿವಾಹ' ಗಾಯತ್ರಿ ಪಿ. ನಾವಡ ಅವರ ಲೇಖನವು ಪ್ರಕಟಗೊಂಡಿದೆ. ಇದರಲ್ಲಿ ಕುಡುಬಿಯರ ವೇಷಭೂಷಣ ಮತ್ತು ಮದುವೆಗೆ ಸಂಬಂಧಪಟ್ಟ ಮಾಹಿತಿಗಳು ದೊರಕುತ್ತವೆ.

ಜಾನಪದ ಪರಂಪರೆಯಲ್ಲಿ ಬದುಕುವ ಜನಪದರು ಬುದ್ಧಿವಂತರು, ವಿಶ್ಲೇಷಿಸುವ ಸಾಮರ್ಥ್ಯ ಉಳ್ಳವರು ಎನ್ನುವ ಗ್ರಹಿಕೆಯ ಹಿನ್ನೆಲೆಯಲ್ಲಿ ಕ್ಷೇತ್ರಕಾರ್ಯ ನಡೆಸಲಾಗಿದೆ. ಈ ಪ್ರಬಂಧದ ಉದ್ದಕ್ಕೂ ಮಾಹಿತಿದಾರರ ಅಭಿಪ್ರಾಯಗಳನ್ನು ಬಳಸಿಕೊಂಡು ಅಧ್ಯಯನವನ್ನು ನಡೆಸುವುದು ಈ ಸಂಶೋಧನೆಯ ಮುಖ್ಯ ಉದ್ದೇಶ ಎಂದು ಹೇಳಬಯಸುತ್ತೇನೆ.

* * *

### ಅಧ್ಯಾಯ ಎರಡು

# ಕುಡುಬಿಯರ ಜನಾಂಗ ಪರಿಚಯ

ಕುಡುಬಿಯರ ಕುರಿತು ಅಧ್ಯಯನ ಮಾಡಿದ ಈವರೆಗಿನ ಎಲ್ಲ ವಿದ್ವಾಂಸರು ಕುಡುಬಿಯರು ಗೋವಾದಿಂದ ಬಂದವರು ಎನ್ನುವುದನ್ನು ಹೇಳಿದ್ದಾರೆ. ಆದರೆ, ಹೋಳಿ ಸಮಾವೇಶ ಮತ್ತು ಕಲಾ ಪ್ರದರ್ಶನ ಕುರಿತ ದೃಶ್ಯಾತ್ಮಕ ಸಂಗ್ರಹದಲ್ಲಿ ಇವರು ಗೋವಾ ಪ್ರಾಂತ್ಯಕ್ಕೆ ಸಂಬಂಧಪಟ್ಟ 'ಕಾಣಕೋಣ' ಎನ್ನುವ ನಿರ್ದಿಷ್ಟ ಪ್ರದೇಶದ ಮೂಲ ನಿವಾಸಿಗಳು. ಮಲ್ಲಿಕಾರ್ಜುನ ಇವರ ಕುಲದೇವರು ಎಂದು ತಿಳಿಸಿದ್ದಾರೆ. ಕಾಣಕೋಣವು ಗೋವಾ ಪ್ರಾಂತಕ್ಕೆ ಸೇರಿದ ಕಾರಣ ಉಳಿದವರು ಇವರ ಮೂಲ ಗೋವಾ ಎಂದಿರಬೇಕು. ಅಂಡಾರುಕಟ್ಟೆ ಪುರುಷ ನಾಯ್ಕ ಇವರ ಮೂಲದ ಕುರಿತು ಹೀಗೆ ಹೇಳಿದ್ದಾರೆ:

'ನಮ್ಮ ಹಿರಿಯರು ಗೋವಾದಿಂದ ಬಂದವರು ಎಂದು ಹೇಳುತ್ತಾರೆ. ನಾವು ಮೊದಲು ಗೋವಾದಿಂದ ಬಾರಕೂರಿಗೆ ಬಂದಾಗ ಅಲ್ಲಿಯ ಅರಸ ನಮಗೆ ಆಶ್ರಯ ನೀಡಿದ್ದ. ಮೊದಲು ನಮ್ಮವರು 'ಕ್ಯಾದಿಕೆರೆ' ಎನ್ನುವಲ್ಲಿ ಗುಂಪಾಗಿ ವಾಸಿಸತೊಡಗಿದ್ದು, ಕಾಲಕ್ರಮೇಣ ಬೇರೆಬೇರೆ ಪ್ರದೇಶದ ಕಾಡುಗಳಲ್ಲಿ ವಾಸಿಸುತ್ತಿರುವುದು ಕಂಡುಬಂದಿದೆ. ಹೆಬ್ರಿಯಿಂದ ಆಚೆಗೆ ನಮ್ಮ ಜನರು ಇಲ್ಲ. ಹಾಲಾಡಿ, ಪೇತ್ರಿ, ಮಂದರ್ತಿ, ಕೊಕ್ಕರ್ಣೆ ಈ ಪ್ರದೇಶಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಗುಂಪಾಗಿ ಇಂದಿಗೂ ವಾಸಿಸುತ್ತಿದ್ದಾರೆ' ಎಂದು ಹೇಳಿದ್ದಾರೆ.

೧೯೮೫ರಲ್ಲಿ ಪ್ರಕಟವಾದ ಸುಬ್ರಾಯ ಹೆಗಡೆಯವರ 'ಅಟ್ಟೆ ಕುಣುಬಿಗಳು' ಪುಸ್ತಕದಲ್ಲಿ ಕುಡುಬಿಯರು ಉತ್ತರ ಕನ್ನಡ ಜಿಲ್ಲೆಯ ಎಲ್ಲಾಪುರ, ಅಂಕೋಲ ಹಾಗೂ ಕಾರವಾರ ತಾಲೂಕುಗಳ ದಟ್ಟ ಅರಣ್ಯಗಳಲ್ಲಿ ವಾಸಿಸುತ್ತಿದ್ದಾರೆಂದು ತಿಳಿಸಿದ್ದಾರೆ. ಡಾ। ರಾಘವ ನಂಬಿಯಾರ್‌ರವರ ಸಂದರ್ಶನದಿಂದ ತಿಳಿದುಬರುವಂತೆ, ಕುಡುಬಿಯರು ಕುಡುನಲ್ಲೂರು ಎಂಬ ಪ್ರದೇಶದಲ್ಲಿ ವಾಸಿಸುತ್ತಿದ್ದು, ಕುಡುನಲ್ಲೂರು ಭಗವತಿಯ ಆರಾಧಕರಾಗಿದ್ದಾರೆ ಮತ್ತು ಕೊಂಕಣಿ ಬಲ್ಲವರಾಗಿದ್ದಾರೆ ಎಂದು ತಿಳಿಸಿದ್ದಾರೆ (ವೈಯಕ್ತಿಕ ಸಂಭಾಷಣೆ).

ಕುಡುಬಿಯರ ಮೂಲವನ್ನು ಕುರಿತು ಇನ್ನೊಂದು ಮಾಹಿತಿ 'ಕೊಂಕಣದ ಕುಡುಬಿಯರು' ಎನ್ನುವ ಪ್ರೊ| ಎ. ವಿ. ನಾವಡ ಅವರ ಪುಸ್ತಕದಲ್ಲಿ ದೊರೆಯುತ್ತದೆ. ಅವರು ನಿಂಜೂರುಬೆಟ್ಟಿನ ಪುರ್ಸಾ ನಾಯ್ಕರ ಜೊತೆ ನಡೆಸಿದ ಸಂಭಾಷಣೆಯ ವಿವರಗಳನ್ನು ಈ ರೀತಿ ನೀಡಿದ್ದಾರೆ:

'ಇದೀಗ ಗೋಂಟ್ ನಾಯ್ಕರು ತೀರಿಕೊಂಡು ಆರು ವರ್ಷಗಳಾದವು. ನಿಂಜೂರು ಬೆಟ್ಟಿನ ಕಡ್ಡಾರ ಬಳಿಯ ನಾನು ಗೋವಾದಿಂದ ಬಂದು ಇಲ್ಲಿ ನೆಲೆನಿಂತಿರುವ ಗೋವೆ ಕುಡುಬಿಯರಲ್ಲಿ ಒಂಬತ್ತನೆ ತಲೆಮಾರಿನವನು. ನಮ್ಮ ಹಿರಿಯರು ಕಡಲಿನಲ್ಲಿ ನಾವೆಗಳ ಮೂಲಕ ಗೋವಾದಿಂದ ಬಂದು ಸೀತಾನದಿಯ ಮೂಲಕ ಬಾರಕೂರಿಗೆ ತಲುಪಿದರಂತೆ. ಅಲ್ಲಿಂದ ಮುಂದೆ ಆ ನದಿಯ ಎರಡು ದಡಗಳಲ್ಲಿ ನಮ್ಮವರು ನೆಲೆನಿಂತರು. ಸುರಾಲಿನ (ಜೈನ) ತೋಳಹಾರ ಅರಸ (ಸಿ)ರಲ್ಲಿ ಪ್ರಸಿದ್ಧರಾದ ಕುಸುವಂತಿ ತೋಳಾರ್ತಿಯವರು ನಮಗೆ ನೂರು ಎಕರೆ ಕಾಡನ್ನು ಉಂಬಳಿಯಾಗಿ ಕೊಟ್ಟು ನೆಲೆ ನಿಲ್ಲುವಂತೆ ಹೇಳಿದರು. ಆ ಕಾಡನ್ನು ಕಡಿದು ನಾವು ಗದ್ದೆ ಮಾಡಿದೆವು. ಇಂದು ನಮ್ಮವರು ಅನುಭವಿಸುತ್ತಿರುವ ಹೆಚ್ಚಿನ ಭೂಮಿ ೧೯೭೪ರ ಭೂಮಸೂದೆ ಕಾಯಿದೆ ಬರುವ ಮೊದಲು ಸೂರಾಲು ಅರಮನೆಗೆ ಸೇರಿದ್ದು. ನಾವು ಅವರ ಒಕ್ಕಲಾಗಿದ್ದೆವು. ಕಳೆದ ತಲೆಮಾರಿನ ತನಕವೂ ಅರಮನೆಗೆ, ಸೂರಾಲು ಮಹಾಲಿಂಗೇಶ್ವರ ದೇವಸ್ಥಾನಕ್ಕೆ ನಮ್ಮವರು ಜಿಟ್ಟಿ ಚಾಕರಿಗೆ ಹೋಗಬೇಕಿತ್ತು.' (ಪುಟ ೧೭).

ಮಂಗಳೂರು ಬಜ್ಪೆ ಸಮೀಪದ ಕೊಡಿಯಾಳ್ ಕುಡುಬಿಯರ ಬಗೆಗೆ ಎಡಪದವಿನ ಎಂ. ಗೋಪಾಲ ಗೌಡರು ಹೀಗೆ ಹೇಳುತ್ತಾರೆ:

'ಗೋವಾದಲ್ಲಿ ಪೋರ್ಚುಗೀಸರ ಬಲವಂತಕ್ಕೆ ನೊಂದು ಓಡಿಬಂದ ಕುಡುಬಿಯರು ಉಳ್ಳಾಲದ ರಾಣಿ ಅಬ್ಬಕ್ಕನ ಆಶ್ರಯ ಪಡೆದರು. ನಮ್ಮ ಜಾತಿಯ ಹಲವು ಜನರು ರಾಣಿಯ ಸೈನ್ಯ ಸೇರಿಕೊಂಡರು. ಮೂಲತಃ ಪೋರ್ಚುಗೀಸರ ವೈರತ್ವವನ್ನು ಬೆಳೆಸಿಕೊಂಡಿದ್ದ ಅಬ್ಬಕ್ಕ ಪೋರ್ಚುಗೀಸರ ಬಗೆಗೆ ಅಸಹನೆಯಿಂದ ಇದ್ದು ನಮ್ಮವರನ್ನು ತುಂಬ ಆತ್ಮೀಯವಾಗಿ ಕಂಡುಕೊಂಡಳು. ಉಂಬಳಿ ಗದ್ದೆ ನೀಡಿ ಕೃಷಿ ಮಾಡುವಂತೆ ಪ್ರೋತ್ಸಾಹಿಸಿದಳು. ಹೀಗಾಗಿ ನೇತ್ರಾವತಿ ನದಿಯ ದಡವಾದ ಅಡ್ಯಾರ್, ಕೊಣಾಜೆ, ಕುತ್ತಾರು ಗ್ರಾಮಗಳಲ್ಲಿ ನಮ್ಮವರ ತಾಣಗಳನ್ನು ಕಾಣಬಹುದು' ಎನ್ನುತ್ತಾರೆ (ಪುಟ ೧೭).

ಈ ವರೆಗೆ ದೊರೆತ ಮೌಖಿಕ ಹಾಗೂ ಲಿಖಿತ ಆಧಾರದ ಮೇಲೆ ಕುಡುಬಿಯರು ಗೋವಾ ಪ್ರಾಂತ್ಯಕ್ಕೆ ಸೇರಿದ ಮೂಲನಿವಾಸಿಗಳೆಂದು ಹದಿನಾರನೇ ಶತಮಾನದ ಕಾಲಘಟ್ಟದಲ್ಲಿ ಪೋರ್ಚುಗೀಸರ ಆಳ್ವಿಕೆಯಲ್ಲಿ ಮತಾಂತರಕ್ಕೆ ಹೆದರಿಕೊಂಡು ಕರ್ನಾಟಕದ ಕರಾವಳಿ ಪ್ರದೇಶದ ಕಾಡುಗಳಲ್ಲಿ ಬಂದು ನೆಲೆಸಿರುವುದನ್ನು ಸ್ಪಷ್ಟಪಡಿಸಬಹುದು.

## 'ಕುಡುಬಿ' ಪದ ನಿಷ್ಪತ್ತಿ:

ಭಾರತದ ಬುಡಕಟ್ಟು ಅಧ್ಯಯನ ನಡೆಸಿದ ಖ್ಯಾತ ಜರ್ಮನ್ ಸಾಮಾಜಿಕ ಮಾನವಶಾಸ್ತ್ರಜ್ಞ ಡಾ। ಸ್ಟೀಫನ್ ಫಚ್‌ರವರು ಕುಡುಬಿಯರನ್ನು ದಕ್ಷಿಣ ಭಾರತದಲ್ಲಿರುವ ಆಹಾರ ಸಂಗ್ರಹಣೆಯ ಹಂತದಲ್ಲಿರುವ ಮತ್ತು ಬೇಟೆಯಾಡುವ ಬುಡಕಟ್ಟು ಜನಾಂಗ ಎಂದು ಕರೆದಿದ್ದಾರೆ. ಡಾ। ಪಿ. ಗುರುರಾಜ ಭಟ್ ಅವರ 'ಎ ಹಿಸ್ಟರಿ ಆಫ್ ತುಳುನಾಡು' (೧೯೬೩), ಥರ್ಸ್ಟನ್ ಅವರ 'ದ ಕಾಸ್ಟ್ಸ್ ಅಂಡ್ ಟ್ರೈಬ್ಸ್ ಆಫ್ ಸದರ್ನ್ ಇಂಡಿಯಾ' ಮತ್ತು ದಕ್ಷಿಣ ಕನ್ನಡ ಜಿಲ್ಲಾ ಗಜೆಟಿಯರ್‌ನ ಮುಖ್ಯ ಸಂಪಾದಕರಾದ ಅಭಿಶಂಕರ್ ಅವರು ತಮ್ಮ ಗ್ರಂಥಗಳಲ್ಲಿ ಮತ್ತು ವಿವಿಧ ವರದಿಗಳಲ್ಲಿ ಕುಡುಬಿಯರನ್ನು ಬೇಟೆಯಾಡುವ ಬುಡಕಟ್ಟು, ಅಭಿರುಚಿಯುಳ್ಳ ಬುಡಕಟ್ಟು ಸ್ಥಳ ಬದಲಿಕೆಯ ಬೇಸಾಯ ಮಾಡುವ ಕಾಡಿನ ಬುಡಕಟ್ಟು ಎಂಬುದಾಗಿ ವರ್ಣಿಸಿದ್ದಾರೆ.

'ಕುಡುಬಿ ಪದವು ನೆರೆ ಹೊರೆಯ ಜನರು ಬ್ರಿಟಿಷ್ ಜನಾಂಗೀಯ ಸಮೀಕ್ಷಾಕಾರರು ಮತ್ತು ರಾಜ್ಯದ ಆಡಳಿತಗಾರರು ನೀಡಿದ ಪದವಾಗಿದೆ. ಮೂಲತಃ ಕುಡುಬಿ ಜನಾಂಗದೊಳಗೆ ಬಳಕೆಯಲ್ಲಿರುವ ಪದ ಎಂದು ಡಾ। ವೈ. ರವೀಂದ್ರನಾಥ್ ರಾವ್ ಅಭಿಪ್ರಾಯ ಪಟ್ಟಿದ್ದಾರೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಈ ಬಗೆಗೆ ಮಾಹಿತಿದಾರರು ನೀಡಿದ ಮಾಹಿತಗಳ ಆಧಾರದಲ್ಲಿ ಹೇಳುವುದಾದರೆ ಕುಡುಬಿ ಎನ್ನುವ ಪದ ಕುಟುಂಬಿ ಎಂಬುದರಿಂದ ಬಂದಿರಬಹುದು. ಯಾಕೆಂದರೆ, 'ಕುಟುಂಬಿ' ಎಂಬುದನ್ನು ಕುಟುಂಬ ಎಂಬರ್ಥದಲ್ಲಿ ವಿವೇಚಿಸಿದರೆ ಎಲ್ಲರು ಒಟ್ಟಾಗಿ ವಾಸಿಸುವ ವರ್ಗದವರು ಎಂದಾಗಿದೆ. ಈ ಹಿನ್ನೆಲೆಯಲ್ಲಿ ಕುಡುಬಿಯರು ಬದುಕುವ ರೀತಿನೀತಿಗಳು ಮತ್ತು ಅವರ ವಾಸಸ್ಥಾನವನ್ನು ಗಮನಿಸಿದರೆ ಇದಕ್ಕೆ ಹೆಚ್ಚು ಪುಷ್ಟಿ ದೊರೆಯುತ್ತದೆ.

## ಕುಡುಬಿಯರ ಭಾಷೆ:

ಕೊಂಕಣಿಯು ಕುಡುಬಿಯರ ಆಡುಭಾಷೆಯಾಗಿದೆ. ಈಶ್ವರ ಎನ್. ಜೋಶಿಯವರು ತಮ್ಮ 'ದಕ್ಷಿಣ ಕನ್ನಡದ ಕುಡುಬಿಯರು' ಎನ್ನುವ ಕೃತಿಯಲ್ಲಿ ಕುಡುಬಿಯರ ಭಾಷೆ ಕಾಡುಕೊಂಕಣಿ ಎಂದು ತಿಳಿಸಿದ್ದಾರೆ. ಡಾ। ವೈ. ರವೀಂದ್ರನಾಥ ರಾವ್ ಅವರು ತಮ್ಮ ಸಂಶೋಧನ ಪ್ರಬಂಧದಲ್ಲಿ ಕುಡುಬಿಯರ ಮಾತೃಭಾಷೆ ಕಾಡುಕೊಂಕಣಿಯಲ್ಲ, ಅದು ಕೊಂಕಣಿಯ ಒಂದು ಪ್ರಭೇದವಾಗಿದೆ ಎಂದಿದ್ದಾರೆ. ಪ್ರೊ। ಎ. ವಿ. ನಾವಡ, ಡಾ। ಜೆರಾಲ್ಡ್ ಪಿಂಟೋ ಕುಡುಬಿಯರು ಕೊಂಕಣಿ ಭಾಷೆ ಯನ್ನು ಮಾತನಾಡುತ್ತಾರೆಂದು ಅಭಿಪ್ರಾಯಪಟ್ಟಿದ್ದಾರೆ.

ಕ್ಷೇತ್ರಕಾರ್ಯ ನಡೆಸುತ್ತಿದ್ದ ಸಂದರ್ಭದಲ್ಲಿ ಅವರೊಡನೆ ಅವರ ಭಾಷೆಯ ಬಗೆಗೆ ಕೇಳಿದಾಗ ಯಾವುದೇ ರೀತಿಯ ಅರಿವು ಅವರಲ್ಲಿಲ್ಲದಿರುವುದು ಕಂಡುಬಂತು. ಈ ಅಧ್ಯಯನವ್ಯಾಪ್ತಿ

ಪ್ರದೇಶದ ಒಳಗಡೆ ಕುಡುಬಿಯರ ಮಾತೃಭಾಷೆಯಲ್ಲಿ ಪ್ರಾದೇಶಿಕ ವ್ಯತ್ಯಾಸಗಳಿರುವುದನ್ನು ಗಮನಿಸಿದ್ದೇನೆ. ಇವರ ಭಾಷೆಯ ಕುರಿತು ಹೇಳುವುದಾದರೆ ಗೋವಾದಿಂದ ಪೋರ್ಚುಗೀಸರ ದಾಳಿಗೆ ಮತ್ತು ಮತಾಂತರಕ್ಕೆ ಹೆದರಿಕೊಂಡು ಬಂದವರಲ್ಲಿ ಕುಡುಬಿಯರಂತೆ ಇನ್ನೂ ಅನೇಕರಿದ್ದಾರೆ. ಅವರಲ್ಲಿ ಮುಖ್ಯವಾಗಿ ಗೌಡ ಸಾರಸ್ವತರು, ರಾಜಾಪುರ ಸಾರಸ್ವತರು ಮತ್ತು ಚಿತ್ರಾಪುರ ಸಾರಸ್ವತರು ಈ ಮೂವರೂ ಆಡುವ ಮಾತೃಭಾಷೆಯಲ್ಲಿರುವ ಅನೇಕ ಪದಗಳು ಕುಡುಬಿಯರ ಭಾಷೆಯಲ್ಲೂ ಇರುವುದನ್ನು ಗಮನಿಸಬಹುದು. ಇವರೆಲ್ಲರೂ ಕೂಡ ಗೋವಾದಲ್ಲಿ ಒಟ್ಟಾಗಿ ವಾಸಮಾಡುತ್ತಿದ್ದುದ ರಿಂದ ಇವರ ಭಾಷೆಯ ಒಳಗಡೆ ಪರಸ್ಪರ ಕೊಳುಕೊಡುಗೆಗಳು ನಡೆದಿವೆ ಎನ್ನಬಹುದು. ಭಾಷೆಯಂತೆಯೇ ಈ ನಾಲ್ಕು ವರ್ಗದವರ ಸಂಪ್ರದಾಯಗಳಿಗೂ ಹೆಚ್ಚಿನ ಹೋಲಿಕೆಗಳಿರುವುದನ್ನು ಗಮನಿಸಬಹುದು. ಇದು ಗೋವೆಯಿಂದ ಆ ಸಂದರ್ಭದಲ್ಲಿ ಬಂದ ಬೇರೆಬೇರೆ ವರ್ಗಗಳ ನಡುವಿನ ಸಮಗ್ರವಾದ ತೌಲನಿಕ ಅಧ್ಯಯನಕ್ಕೆ ವಿಷಯವಾಗಬಲ್ಲುದು.

## ಆಹಾರಪದ್ಧತಿ:

ಕುಡುಬಿಯರು ಮಿಶ್ರಾಹಾರಿಗಳು. ಆದರೂ ಇವರು ತಾವು ಮನೆಯಲ್ಲಿ ಸಾಕಿದ ಕೋಳಿ, ಮೊಲ ಮುಂತಾದ ಪ್ರಾಣಿಗಳನ್ನು ತಿನ್ನುವುದಿಲ್ಲ. ಅವರು ಸಾಕಿದ ಪ್ರಾಣಿಗಳ ಮೇಲೆ ತಾವು ಭಾವನಾತ್ಮಕ ಸಂಬಂಧಗಳನ್ನು ಬೆಳೆಸಿಕೊಂಡಿರುವುದರಿಂದ ಅವುಗಳನ್ನು ತಿನ್ನುವುದಕ್ಕೆ ಉಪಯೋಗಿಸದೆ ಕೇವಲ ವಾಣಿಜ್ಯ ಉದ್ದೇಶಕ್ಕಾಗಿ ಬಳಸುತ್ತಿದ್ದರು. ಈ ಕುರಿತು ಅಂಡಾರು ಕಟ್ಟೆ ರಾಮ ನಾಯ್ಕ ಅವರು ಹೀಗೆ ಹೇಳುತ್ತಾರೆ: 'ನಮ್ಮ ಆರಾಧ್ಯದೈವ ಗೋವೆಯ ಅಮ್ಮನಿಗೆ 'ಕೋ' ಎನ್ನುವ ಶಬ್ದ ಇಷ್ಟವಿಲ್ಲ. ಆದ್ದರಿಂದ ನಾವು ಅದನ್ನು ತಿನ್ನುವುದಿಲ್ಲ' ಎನ್ನುತ್ತಾರೆ. ಆದರೆ ಇತ್ತೀಚೆಗೆ ಕೋಳಿ ಮಾಂಸವನ್ನು ಅಡುಗೆಯಲ್ಲಿ ಉಪಯೋಗಿಸುತ್ತಾರೆ.

ಹಿಂದೆ ಕುಡುಬಿಯರು ಮೀನುಮಾಂಸಗಳನ್ನು ಮನೆಯೊಳಗೆ ಅಡುಗೆ ಮಾಡುತ್ತಿರಲಿಲ್ಲ. ಅದು ಅವರಿಗೆ ನಿಷಿದ್ಧವಾಗಿತ್ತು. ಯಾಕೆಂದರೆ ಮನೆಯೊಳಗೆ ಅವರು ಕುಲದೇವರನ್ನು ಪೂಜಿಸುತ್ತಿದ್ದರು. ಹೀಗಾಗಿ ಮನೆಯ ಹೊರಗೆ ಪ್ರತ್ಯೇಕ ಒಂದು ಒಲೆಯನ್ನು ಹಾಕಿ ಮಣ್ಣಿನ ಪಾತ್ರೆಗಳನ್ನು ಉಪಯೋಗಿಸಿ ಅಡುಗೆಯನ್ನು ಮಾಡಿ ಅಂಗಳದಲ್ಲಿಯೇ ಕುಳಿತು ಊಟ ಮಾಡುತ್ತಿದ್ದರು. ಆ ಪಾತ್ರೆಗಳನ್ನು ಮನೆಯ ಒಳಗಡೆ ಅಡುಗೆ ಕೆಲಸಕ್ಕೆ ಉಪಯೋಗಿಸುತ್ತಿರಲಿಲ್ಲ.

ಕುಡುಬಿಯರು ಸಸ್ಯಾಹಾರಿಗಳೂ ಹೌದು. ಅವರು ತಮ್ಮ ಗದ್ದೆಗಳಲ್ಲಿ ಹಟ್ಟಿಗೊಬ್ಬರವನ್ನು ಹಾಕಿ ತರಕಾರಿಗಳನ್ನು ಬೆಳೆಸಿ ಅದನ್ನು ಅಡುಗೆಯಲ್ಲಿ ಉಪಯೋಗಿಸುತ್ತಾರೆ. ಗೋವೆಯ ಕೆಸು ಇವರಲ್ಲಿ ಬಹಳ ಜನಪ್ರಿಯವಾದ ಆಹಾರಪದಾರ್ಥ. ಇದರ ಕುರಿತು ಗಾಂಜೀಬಾಯಿ ಯೆಡ್ತಾಡಿ ಈ ರೀತಿ ಅಭಿಪ್ರಾಯಪಟ್ಟಿದ್ದಾರೆ: 'ಈ ಗೋವೆಕೆಸುವನ್ನು ನಮ್ಮ ಹಿಂದಿನವರು ಗೋವಾದಿಂದ ಓಡಿಬಂದಾಗ ಗಡ್ಡೆಯನ್ನು ತಂದು ಇಲ್ಲಿ ಬೆಳೆಸಿದ್ದಾರೆ. ಹೀಗಾಗಿ ಇದಕ್ಕೆ ಗೋವೆಕೆಸು ಎನ್ನುವ

ಹೆಸರು ಬಂದಿದೆ. ನಮ್ಮ ಹಿಂದಿನವರು ತಮ್ಮ ದೈನಂದಿನ ಆಹಾರದಲ್ಲಿ ಇದನ್ನು ಹೆಚ್ಚು ಬಳಸುತ್ತಿದ್ದರು. ಪದಾರ್ಥಗಳನ್ನು ತಿಂಡಿಗಳನ್ನು ಇದರಿಂದ ತಯಾರಿಸುತ್ತಿದ್ದರು' ಎನ್ನುತ್ತಾರೆ.

ಕುಡುಬಿಯರು ಮನೆಗಳಲ್ಲಿ ಅಡುಗೆ ಮಾಡಲು ಮಣ್ಣಿನ ಪಾತ್ರೆಗಳನ್ನು ಬಳಸುತ್ತಿರುವುದು ಕಂಡುಬರುತ್ತದೆ. ಇಂದಿಗೂ ಕುಡುಬಿಯರ ಬಹಳಷ್ಟು ಮನೆಗಳಲ್ಲಿ ಮಣ್ಣಿನ ಪಾತ್ರೆಗಳನ್ನೇ ಬಳಸುತ್ತಿದ್ದಾರೆ. ಆದರೆ ಇತ್ತೀಚೆಗೆ ಅಲ್ಯುಮಿನಿಯಂ ಮತ್ತು ಸ್ಟೀಲ್ ಪಾತ್ರೆಗಳು ಕೂಡ ಅವರ ಅಡುಗೆಮನೆಯನ್ನು ಪ್ರವೇಶಿಸಿದ್ದು ಕಂಡುಬರುತ್ತದೆ. ಮಣ್ಣಿನ ಪಾತ್ರೆಯಲ್ಲಿ ಅಡುಗೆ ಮಾಡುವ ಬಗ್ಗೆ ಅವರು ಹೀಗೆ ಹೇಳುತ್ತಾರೆ: 'ಮಣ್ಣಿನ ಪಾತ್ರೆಯಲ್ಲಿ ಮಾಡಿದ ಅಡುಗೆಗೆ ರುಚಿ ಹೆಚ್ಚು. ಹೆಚ್ಚು ದಿನ ಆಹಾರ ಕೆಡದಂತೆ ಸಂಗ್ರಹಿಸಿಡಬಹುದು' ಇತ್ಯಾದಿ. ಕುಡುಬಿಯರು ಮೂರು ಹೊತ್ತು ಕುಚ್ಚಿಲಕ್ಕಿಯ ಗಂಜಿಯನ್ನೇ ಊಟ ಮಾಡುತ್ತಾರೆ. ಆದರೆ ಇತ್ತೀಚೆಗೆ ಬೆಳಗಿನ ಉಪಾಹಾರಕ್ಕೆ ಇಡ್ಲಿ, ದೋಸೆ ಮುಂತಾದ ತಿಂಡಿಗಳನ್ನು ಉಪಯೋಗಿಸುತ್ತಿರುವುದು ಕಂಡುಬರುತ್ತದೆ. ಒಟ್ಟಾರೆಯಾಗಿ, ಕುಡುಬಿಯರ ಆಹಾರಪದ್ಧತಿಯಲ್ಲೂ ಕೂಡ ಬಹಳಷ್ಟು ಬದಲಾವಣೆಗಳಾಗಿರುವುದು ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿಗಳಿಂದ ತಿಳಿದುಬರುತ್ತದೆ. ಹಿಂದಿನ ಯಾವುದೇ ನಿಷಿದ್ಧತೆಗಳು ಇಂದು ಜಾರಿಯಲ್ಲಿಲ್ಲ. ಆದರೆ ಹೋಳಿಹಬ್ಬ ಮತ್ತು ಮದುವೆಯ ಸಂದರ್ಭಗಳಲ್ಲಿ ಮಾಂಸಾಹಾರವನ್ನು ಮತ್ತು ಮದ್ಯವನ್ನು ಇವರು ಕಟ್ಟುನಿಟ್ಟಾಗಿ ನಿಷೇಧಿಸುತ್ತಾರೆ. ಇವು ಅವರ ಧಾರ್ಮಿಕ ನಂಬಿಕೆಗಳ ಗಟ್ಟಿತನವನ್ನು ಸೂಚಿಸುತ್ತದೆ.

## ವೃತ್ತಿ:

ಭತ್ತದ ವ್ಯವಸಾಯ ಕುಡುಬಿಯರ ಪ್ರಧಾನ ವೃತ್ತಿ. ಇವರು ಶ್ರಮಜೀವಿಗಳು. ಬೆಸೆಗಲ್ ಸಣ್ಣ ನಾಯ್ಕ ಅವರು ವೃತ್ತಿಯ ಕುರಿತು ಈ ರೀತಿ ಹೇಳುತ್ತಾರೆ:

'ಕುಡುಬಿಯರು ಹಿಂದೆ ಗೇಣಿದಾರರಾಗಿ ವ್ಯವಸಾಯವನ್ನು ಮಾಡುತ್ತಿದ್ದರು. ತಮ್ಮ ಗದ್ದೆಗಳಲ್ಲಿ ಕೃಷಿಕಾರ್ಯವನ್ನು ಆರಂಭಿಸುವ ಮೊದಲು ಜಮೀನ್ದಾರನ ಗದ್ದೆಯಲ್ಲಿ ಕೃಷಿಕಾರ್ಯಗಳನ್ನು ಮುಗಿಸಿ ಆ ನಂತರ ನಮ್ಮ ಕೃಷಿ ಕಾರ್ಯಗಳನ್ನು ಆರಂಭಿಸಬೇಕಿತ್ತು. ಭೂಮಸೂದೆ ಕಾನೂನು ನಮಗೆ ಒಂದು ವರವಾಗಿ ಪರಿಣಮಿಸಿದೆ. ನೆಮ್ಮದಿಯ ಜೀವನವನ್ನು ನಡೆಸಲು ಸಹಕರಿಸಿದೆ. ಹೇಗೆಂದರೆ, ಮೊದಲು ಬೆಳೆಸಿದ್ದನ್ನು ಗೇಣಿಯ ರೂಪದಲ್ಲಿ ಕೊಡಬೇಕಾಗುತ್ತಿತ್ತು. ಹಾಗಾಗಿ ಕಷ್ಟಕರವಾದ ಜೀವನ ನಮ್ಮದಾಗಿತ್ತು. ಇಂದು ನಾವು ಸ್ವತಂತ್ರ, ಸಣ್ಣ ರೈತರಾಗಿದ್ದು ನಮ್ಮ ಮಕ್ಕಳನ್ನು ವಿದ್ಯಾಭ್ಯಾಸಕ್ಕೆ ಕಳುಹಿಸಲು ನಮಗೆ ಆರ್ಥಿಕ ಸಹಾಯವನ್ನು ನೀಡುವಂತಾಗಿದೆ' ಎನ್ನುತ್ತಾರೆ. ಇವರು ತಮ್ಮ ಗದ್ದೆಗಳಲ್ಲಿ ಭತ್ತ, ಉದ್ದು, ಹುರುಳಿ, ಎಳ್ಳು ಮುಂತಾದ ಧಾನ್ಯಗಳನ್ನು ಬೆಳೆಸುತ್ತಾರೆ. ಬಾಳೆ, ತೆಂಗು, ಅಡಕೆ ತೋಟಗಳನ್ನು ಹೊಂದಿದ್ದಾರೆ. ಭತ್ತದ ಕೊಯಿಲಿನ ಅನಂತರ ಬಗೆಯಬಗೆಯ ತರಕಾರಿಗಳನ್ನು ಗದ್ದೆಗಳಲ್ಲಿ ಬೆಳೆಸುತ್ತಾರೆ. ಈ ತರಕಾರಿಗಳನ್ನು

ಬೆಳೆಸಿ ಮಾರಾಟ ಮಾಡುವ ಕೆಲಸವನ್ನು ಕುಡುಬಿ ಹೆಂಗಸರು ಮಾಡುತ್ತಾರೆ. ಹಿಂದಿನಿಂದಲೂ ಈ ಕೆಲಸದಲ್ಲಿ ಹೆಂಗಸರು ತುಂಬಾ ಜಾಣೆಯರು. ತಾವು ಬೆಳೆಸಿದ ತರಕಾರಿಗಳನ್ನು ಬಾರಕೂರು ಸಂತೆಗೆ ಬುಟ್ಟಿಗಳಲ್ಲಿ ಹೊತ್ತು ಕೊಂಡು ಬಂದು ಅವುಗಳನ್ನು ಮಾರಿ ಹಿಂದಕ್ಕೆ ಹೋಗುವಾಗ ಮನೆಗೆ ಬೇಕಾದ ಸಾಮಾನುಗಳನ್ನು ಕೊಂಡೊಯ್ಯುತ್ತಿದ್ದರು.

ಇವತ್ತಿಗೂ ಕುಡುಬಿ ಹೆಂಗಸರು ವಾಣಿಜ್ಯ ಬೆಳೆಯಾಗಿ ತರಕಾರಿಗಳನ್ನು ಬೆಳೆಸುತ್ತಾರೆ. ಇವರು ಬೆಳೆಸಿದ ತರಕಾರಿಗಳಿಗೆ ಉಡುಪಿ, ಬ್ರಹ್ಮಾವರ, ಕುಂದಾಪುರ ಮುಂತಾದ ಕಡೆಗಳಲ್ಲಿ ಎಲ್ಲಿಲ್ಲದ ಬೇಡಿಕೆಗಳಿವೆ. ಮೇಲೆ ತಿಳಿಸಿದ ಪ್ರದೇಶದ ವ್ಯಾಪಾರಿಗಳು ವಾಹನಗಳ ಮೂಲಕ ಕುಡುಬಿಯರ ವಾಸಸ್ಥಳಗಳಿಗೆ ಹೋಗಿ ಒಂದು ನಿರ್ದಿಷ್ಟ ಸ್ಥಳದಲ್ಲಿ ಅವುಗಳನ್ನೆಲ್ಲ ಸಂಗ್ರಹಿಸಿ, ತೂಕ ಮಾಡಿ ಅವರಿಗೆ ಅದರ ಬೆಲೆಯನ್ನು ಕೊಟ್ಟು ವಾಹನಗಳಲ್ಲಿ ತುಂಬಿಸಿಕೊಂಡು ಬಂದು ವ್ಯಾಪಾರ ಮಾಡುತ್ತಾರೆ. ಹೀಗಾಗಿ ಹಿಂದಿನಂತೆ ಈಗ ಬುಟ್ಟಿಗಳಲ್ಲಿ ತುಂಬಿಸಿಕೊಂಡು, ತಲೆಮೇಲೆ ಹೊತ್ತು ಐದಾರು ಮೈಲಿ ನಡೆದು ಹೋಗಿ ಮಾರಾಟ ಮಾಡುವ ಕಷ್ಟ ಅಥವಾ ತೊಂದರೆ ಇಲ್ಲ. ಇವರಲ್ಲಿ ಗೋವೆಕೆಸುವನ್ನು ಬಹಳ ಪ್ರಧಾನ ವಾಣಿಜ್ಯ ಬೆಳೆಯಾಗಿ ಬೆಳೆಸುತ್ತಿದ್ದರು. ಇದಕ್ಕೆ ಊರಿನಲ್ಲಿ ಬಹಳ ಬೇಡಿಕೆ ಇದೆ. ಹೀಗಾಗಿ ಅವರು ಅದನ್ನು ತಮ್ಮ ಗದ್ದೆಗಳಲ್ಲಿ ಬೆಳೆಸಿ ಮಾರಾಟ ಮಾಡುತ್ತಾರೆ. ಇವುಗಳಿಗೆ ಪ್ರತಿದಿನವೂ ನೀರನ್ನು ಹಾಕುವ ಕೆಲಸವನ್ನು ಮನೆಯ ಹೆಂಗಸರು ತಪ್ಪದೆ ಮಾಡುತ್ತಾರೆ. ಯಾಕೆಂದರೆ, ಕೆಸುವಿಗೆ ಒಂದು ದಿನ ಹಾಕದಿದ್ದರೂ ಅದು ಬಾಡಿ ಹೋಗುತ್ತದೆ. ಅಲ್ಲದೆ, ಅದು ಬಹಳ ಲಾಭದಾಯಕ ವಾಣಿಜ್ಯ ಬೆಳೆಯಾಗಿರುವುದರಿಂದ ಅದರ ಪೋಷಣೆಯಲ್ಲಿ ಅತ್ಯಂತ ಕಾಳಜಿ ವಹಿಸುತ್ತಾರೆ. ಈ ಕುರಿತು ಸಣ್ಣ ನಾಯ್ಕ ಬೆನಗಲ್ ಅವರು ಹೀಗೆ ಹೇಳಿದ್ದಾರೆ: 'ಹಿಂದೆ ಕುಡುಬಿಯರಲ್ಲಿ ಮದುವೆಗಳು ಮಳೆಗಾಲದಲ್ಲಿಯೇ ನಡೆಯುತ್ತಿದ್ದವು. ಇವತ್ತು ಕೂಡ ಮಳೆಗಾಲದ ಸಂದರ್ಭದಲ್ಲಿಯೇ ನಡೆಯುತ್ತವೆ. ಹಿಂದೆ ಯಾಕೆ ಮಳೆಗಾಲದಲ್ಲಿ ನಡೆಯುತ್ತಿದ್ದವೆಂದರೆ ಮಳೆಗಾಲದಲ್ಲಿ ಮಳೆ ಬರುತ್ತಿರುವುದರಿಂದ ಕೆಸುವಿಗೆ ನೀರು ಹಾಕುವ ಕೆಲಸ ಇರುತ್ತಿರಲಿಲ್ಲ. ಹೀಗಾಗಿ ಈ ಸಂದರ್ಭದಲ್ಲಿ ಮದುವೆಗಳನ್ನು ಇಟ್ಟುಕೊಳ್ಳುತ್ತಾರೆ.' ಆದರೆ, ಇವತ್ತು ಈ ಬೆಳೆಯನ್ನು ಅವರು ವಾಣಿಜ್ಯ ಬೆಳೆಯಾಗಿ ಬೆಳೆಸುತ್ತಿಲ್ಲ. ಯಾಕೆಂದರೆ, ಹಿಂದೆ ಇದು ಒಂದು ಲಾಭದಾಯಕ ಬೆಳೆಯಾಗಿದ್ದ ಸಂದರ್ಭದಲ್ಲಿ ಬೇರೆ ವರ್ಗದವರು ಕೂಡ ಇದನ್ನು ತಮ್ಮ ಗದ್ದೆಗಳಲ್ಲಿ ಬೆಳೆಸಿ ಮಾರಾಟ ಮಾಡುವುದಕ್ಕೆ ಆರಂಭಿಸಿದಾಗ ಕ್ರಮೇಣ ಇದರ ಪೂರೈಕೆ ಹೆಚ್ಚಿ ಬೆಲೆ ಹಾಗೂ ಲಾಭಾಂಶ ಕಡಿಮೆಯಾಯಿತು. ಹೀಗಾಗಿ ಕಾಲಕ್ರಮೇಣ ಇದು ಮನೆಯ ಸ್ವಂತ ಉಪಯೋಗಕ್ಕಾಗಿ ಮಾತ್ರ ಇದನ್ನು ಬೆಳೆಸುತ್ತಾರೆ.

ಕುಡುಬಿ ಹೆಂಗುಸರು ಈಚಲ ಮರದ ಒಲಿಯಿಂದ ಚಾಪೆಗಳನ್ನು ತಯಾರಿಸುತ್ತಿದ್ದರು. ಈ ಚಾಪೆಗಳನ್ನು ಅವರು ಬಿಡುವಿನ ವೇಳೆಯಲ್ಲಿ ಹೆಣೆಯುತ್ತಿದ್ದರು. ಈಚಲ ಮರದ ಒಲಿಗಳನ್ನು ತರಲು ಪುರುಷರು ಸಹಾಯ ಮಾಡುತ್ತಿದ್ದರು. ತಂದ ಒಲಿಗಳನ್ನು ಒಪ್ಪವಾಗಿ ಕತ್ತರಿಸಿ ಅವುಗಳನ್ನು ಬಿಸಿಲಲ್ಲಿ ಒಣಗಿಸಿ ಉರುಟಾಗಿ ಸುತ್ತಿ ಚಾಪೆ ಹೆಣೆಯಲು ಉಪಯೋಗಿಸುತ್ತಿದ್ದರು. ಇವರು

ತಯಾರಿಸಿದ ಚಾಪೆಗಳಿಗೆ ಹೆಚ್ಚಿನ ಬೇಡಿಕೆಗಳಿದ್ದವು. ಆದರೆ ಇಂದು ಪ್ಲಾಸ್ಟಿಕ್‌ನಿಂದ ಚಾಪೆಗಳು ಬಂದಿರುವುದರಿಂದ ಜನರು ಅದರ ಹೆಚ್ಚು ಆಕರ್ಷಿತರಾಗಿದ್ದು ಒಲಿಯಿಂದ ತಯಾರಿಸಿದ ಚಾಪೆಗಳಿಗೆ ಬೇಡಿಕೆ ಕಡಿಮೆಯಾಗಿದೆ. ಆದ್ದರಿಂದ ಕುಡುಬಿಯರು ಇಂದು ತಮ್ಮ ಗೃಹೋಪಯೋಗಕ್ಕಾಗಿ ಮಾತ್ರ ಚಾಪೆಗಳನ್ನು ಹೆಣೆಯುತ್ತಾರೆ.

ಕುಡುಬಿ ಗಂಡಸರು ಕೋಣಗಳನ್ನು ಸಾಕುವುದರಲ್ಲಿ ನಿಪುಣರು. ಇವರು ಕಂಬಳದ ಕೋಣಗಳನ್ನು ಸಾಕುತ್ತಾರೆ. ಅದರ ಆರೈಕೆ ಎಂದರೆ ಅವರಿಗೆ ತುಂಬ ಇಷ್ಟ. ಕಂಬಳದಲ್ಲಿ ಕೋಣಗಳನ್ನು ಓಡಿಸುವುದರಲ್ಲಿ ಇವರದು ಎತ್ತಿದ ಕೈ. ಕುಡುಬಿಯರು ದನಗಳನ್ನು ಸಾಕಿ ಅದರ ಹಾಲನ್ನು ಮಾರಾಟ ಮಾಡುತ್ತಾರೆ. ಗೊಬ್ಬರವನ್ನು ವ್ಯವಸಾಯಕ್ಕೆ, ತರಕಾರಿಗೆ, ತೋಟಗಳಿಗೆ ಉಪಯೋಗಿಸುತ್ತಿದ್ದು ಹೆಚ್ಚಿನ ಫಸಲು ಇದರಿಂದ ದೊರೆಯುತ್ತವೆ. ಕುಡುಬಿ ಗಂಡಸರು ಮರಗಳನ್ನು ಕಡಿಯುವುದ ರಲ್ಲಿ, ಅಕ್ಕಿಮುಡಿಗಳನ್ನು ಕಟ್ಟುವುದರಲ್ಲಿ, ತೆಂಗಿನ ಮರಗಳನ್ನು ಹತ್ತುವುದರಲ್ಲಿ ತುಂಬ ಜಾಣರು. ಬೇರೆಯವರ ಮನೆಗಳಲ್ಲಿ ಈ ಕೆಲಸವನ್ನು ಅವರು ನಿರ್ವಹಿಸುತ್ತಾರೆ.

'ಕೊಂಕಣದ ಕುಡುಬಿಯರು' ಎನ್ನುವ ಪುಸ್ತಕದಲ್ಲಿ ಡಾ। ಎ. ವಿ. ನಾವಡ ಅವರು, ಕುಡುಬಿಯರು 'ಕಾಚು' ತಯಾರಿಕೆಯಲ್ಲಿ ಪ್ರವೀಣರು ಎನ್ನುವ ವಿವರಗಳನ್ನು ನೀಡಿದ್ದಾರೆ. 'ಕಾಚು ಮರದ ತೊಗಟೆಯನ್ನು ತೆಗೆದು, ಬೇಯಿಸಿ, ದ್ರವವನ್ನು ತೆಗೆಯುತ್ತಾರೆ. ಈ ಮರಗಳು ಹೆಚ್ಚಾಗಿ ಕುಂದಾಪುರದ ಸುತ್ತಮುತ್ತ ಬೆಳೆಯುತ್ತವೆ. ಬೇರೆ ಕಡೆಗಳಲ್ಲಿ ಅಲ್ಪಪ್ರಮಾಣದಲ್ಲಿ ಸಿಗುತ್ತವೆ.' ಎಂದಿದ್ದಾರೆ. ಕಾಚಿನ ತಯಾರಿಕೆಯು ಅರಣ್ಯ ಇಲಾಖೆಯ ಮೇಲ್ವಿಚಾರಣೆಯಲ್ಲಿ ನಡೆಯುವುದು. ನಿರ್ದಿಷ್ಟ ಮರವನ್ನು ಆಯ್ಕೆ ಮಾಡಿ ಅದನ್ನು ಕತ್ತರಿಸುತ್ತಾರೆ. ಕಾಚನ್ನು ತಯಾರಿಸಲು ಒಲೆಗಳನ್ನು ಹಾಕಬೇಕು. ಇವುಗಳನ್ನು ನೀರು ಮತ್ತು ಬೇಯಿಸಲು ಕಟ್ಟಿಗೆ ಹೆಚ್ಚಿನ ಪ್ರಮಾಣದಲ್ಲಿ ದೊರೆಯುವ ಪ್ರಮಾಣದಲ್ಲಿಯೇ ನಿರ್ಮಿಸುತ್ತಾರೆ. ಕುಡುಬಿ ಗಂಡಸರು ಮರವನ್ನು ಕಡಿದು ಅದರ ತೊಗಟೆಯನ್ನು ತೆಗೆಯುತ್ತಾರೆ. ಅನಂತರ ಅವುಗಳನ್ನು ತೂಕ ಮಾಡಿ ಅರಣ್ಯ ಇಲಾಖೆಯವರು ಕುಡುಬಿಗೆ ಒಪ್ಪಿಸುತ್ತಾರೆ. ಆತ ಅದನ್ನು ತೆಗೆದುಕೊಂಡು ಮನೆಗೆ ತರುತ್ತಾನೆ. ಅನಂತರ ಅದನ್ನು ಬೇಯಿಸುವ ಜವಾಬ್ದಾರಿ ಹೆಂಗಸರದ್ದು. ಅವರು ಕಾಚನ್ನು ಬೇಯಿಸಲು ಹಾಕಿದ ಒಲೆಗಳ ಮೇಲೆ ಮಡಕೆಯನ್ನು ಇಟ್ಟು ಅದರಲ್ಲಿ ನೀರು ತುಂಬಿಸಿ ಕಾಚು ಮರದ ತೊಗಟೆಯನ್ನು ಹಾಕಿ ಬೇಯಿಸುತ್ತಾರೆ. ಈ ರೀತಿ ಬೆಂದ ತೊಗಟೆಯನ್ನು ಇನ್ನೊಂದು ಒಲೆಯಲ್ಲಿರುವ ಪಾತ್ರೆಗೆ ಹಾಕಿ ನೀರು ತುಂಬಿಸಿ ಬೇಯಿಸುತ್ತಾರೆ. ಈ ರೀತಿ ತೊಗಟೆಯನ್ನು ಬೇಯಿಸಿ ಮರದ ಸಾರವನ್ನು ತೆಗೆದು ಅಗಲವಾದ ಮರದ ಮರಿಗೆಗೆ ಹಾಕಿ ತಣಿಯಲು ಬಿಡುತ್ತಾರೆ. ಇದು ತಂಪಾದ ತತ್‌ಕ್ಷಣ ಗಟ್ಟಿಯಾಗುತ್ತಾ ಬರುತ್ತದೆ. ಈ ಕಾಚುಸಾರ ತೆಗೆಯುವ ಬಗ್ಗೆ ಕುಡುಬಿಯರಿಗೆ ಭಯಭಕ್ತಿ ಇದೆ. ಕಾಚು ಮರವನ್ನು ಕಡಿಯಲು ಗೊತ್ತುಮಾಡಿದ ದಿನದಂದು ಅದಕ್ಕೆ ಪೂಜೆಯನ್ನು ಮಾಡುತ್ತಾರೆ. ಮರ ಕಡಿಯಲು ಉಪಯೋಗಿಸುವ ಕತ್ತಿ, ಕೊಡಲಿ ಮತ್ತು ಒಂದು ತೆಂಗಿನಕಾಯಿಯನ್ನು ಅದರ ಬುಡದಲ್ಲಿಟ್ಟು ದೇವರ ಅನುಗ್ರಹದಿಂದ ಕೆಲಸ ಒಳ್ಳೆಯ ರೀತಿಯಲ್ಲಿ ನಡೆಯಲಿ ಎಂದು ಬೇಡಿಕೊಳ್ಳುತ್ತಾರೆ.

ಕ್ಷೇತ್ರಕಾರ್ಯವನ್ನು ನಡೆಸಿ ಈ ಉದ್ಯೋಗದ ಕುರಿತು ಮಾಹಿತಿಯನ್ನು ಸಂಗ್ರಹಿಸಿದಾಗ ಇಂದಿನ ಕುಡುಬಿಯರಿಗೆ ಕಾಚು ಮರದ ಸಾರವನ್ನು ತೆಗೆಯುವ ವೃತ್ತಿಯ ಕುರಿತು ಯಾವುದೇ ಮಾಹಿತಿಗಳು ಇರುವುದು ಕಂಡುಬರುವುದಿಲ್ಲ. ಅದೂ ಅಲ್ಲದೆ ಆ ಮರದ ಕುರಿತಾಗಿ ವಿಚಾರಿಸಿದಾಗಲೂ ಅವರು ಅದನ್ನು ಗುರುತಿಸುವಲ್ಲಿ ವಿಫಲರಾಗಿದ್ದಾರೆ. ಇಂದು ಈ ಕಾಚುಮರಗಳು ಎಲ್ಲಿಯೂ ಕಂಡುಬಾರದೆ ಇರುವುದರಿಂದ ಬಹುಶಃ ಈ ವೃತ್ತಿ ಕಣ್ಮರೆಯಾಗಲು ಮತ್ತು ಇವರಿಗೆ ಆ ಬಗೆಗೆ ಮಾಹಿತಿ ಇಲ್ಲದಿರಲು ಕಾರಣವಾಗಿರಬಹುದು.

## ಉಡುಗೆತೊಡುಗೆಗಳು:

ಕುಡುಬಿಯರ ಉಡುಗೆತೊಡುಗೆಗಳೇ ಅವರ ಸಂಸ್ಕೃತಿಯನ್ನು ಬಿಂಬಿಸುವುದರಲ್ಲಿ ಮುಖ್ಯ ಪಾತ್ರವಹಿಸುತ್ತವೆ. ಗಟ್ಟಿಮುಟ್ಟಾದ ಮೈಕಟ್ಟನ್ನು ಹೊಂದಿರುವ ಕುಡುಬಿ ಸ್ತ್ರೀ ಮತ್ತು ಪುರುಷರು ಕಪ್ಪು ಮೈಬಣ್ಣವನ್ನು ಹೊಂದಿರುವರು. ಕುಡುಬಿ ಸ್ತ್ರೀಯರು ತಲೆತುಂಬ ಎಣ್ಣೆಯನ್ನು ಹಚ್ಚಿ ಹೂವನ್ನು ಮುಡಿಯುತ್ತಾರೆ. ಇವರಲ್ಲಿ ಮದುವೆಯಾಗುವ ಮೊದಲು ಹೆಣ್ಣುಮಕ್ಕಳು ಕನಕಾಂಬರ ಹೂವನ್ನು ಮುಡಿಯುವುದು ನಿಷೇಧ. ಈ ಬಗೆಗೆ ರುಕ್ಮಿಣೀಬಾಯಿ ಕುಸುಪಿನ್‌ತೋಟ ಇವರನ್ನು ವಿಚಾರಿಸಿದಾಗ 'ನಮ್ಮಲ್ಲಿ ಹಿಂದೆ ಮದುವೆಗೆ ಮುಂಚೆ ಕನಕಾಂಬರವನ್ನು ಮುಡಿಯುತ್ತಿರಲಿಲ್ಲ. ಈ ಹೂವನ್ನು ಮದುವೆಯಿಂದೇ ಮುಡಿಸುತ್ತಾರೆ.' ಈ ಕುರಿತು ಇನ್ನಷ್ಟು ಮಾಹಿತಿಗಳನ್ನು ಕ್ಷೇತ್ರ ಕಾರ್ಯದ ಮೂಲಕ ಸಂಗ್ರಹಿಸಿದಾಗ ಗೋವೆಯಿಂದ ಬಂದ ಕ್ರಿಶ್ಚಿಯನರು ಕೂಡ ತಮ್ಮ ಮದುವೆಗಳಲ್ಲಿ ಕನಕಾಂಬರ ಹೂವನ್ನು ಬಳಸುತ್ತಿರುವುದು ಕಂಡುಬಂತು. ಈ ಎರಡು ಜನಾಂಗಗಳೂ ಗೋವದಲ್ಲಿ ಇದ್ದಂತಹವು. ಮತ್ತು ಇವೆರಡು ಜನಾಂಗಗಳಲ್ಲೂ ಮದುವೆಯ ಸಂದರ್ಭದಲ್ಲಿ ಕನಕಾಂಬರವನ್ನು ವಿಶೇಷವಾಗಿ ಮುಡಿಯುವ ಸಂಪ್ರದಾಯ ಇದ್ದುದು ಪ್ರಾದೇಶಿಕಪದ್ಧತಿಯಾಗಿ ಬಂದಿರಬಹುದು ಎಂದು ಊಹಿಸಲಾಗಿದೆ. ಇವರು ಕೈಬಳೆ ಕಾಲುಂಗುರಗಳನ್ನು ಧರಿಸುತ್ತಾರೆ. ಕುತ್ತಿಗೆಯಲ್ಲಿ ಬಗೆಬಗೆಯ ಮಣಿಸರಗಳನ್ನು ಧರಿಸುತ್ತಾರೆ. ಚಿನ್ನದಿಂದ ತಯಾರಿಸಿದ ಕೆಲವು ವಿಶಿಷ್ಟ ಆಭರಣಗಳೂ ಇವರಲ್ಲಿ ಇವೆ. ಇವುಗಳಲ್ಲಿ ಹಿತ್ತಲಕಾಯಿಸರ ಬಹಳ ಮುಖ್ಯವಾದುದು. ಈ ಸರದಲ್ಲಿ ತಮ್ಮ ಹಿತ್ತಲಲ್ಲಿ ಬೆಳೆಸುವ ತರಕಾರಿಗಳನ್ನು ಹೋಲುವ ಕೆಲವು ಆಭರಣಗಳನ್ನು ಚಿನ್ನದಿಂದ ತಯಾರಿಸಿ ಹಾಕಿಕೊಳ್ಳುತ್ತಾರೆ. ಈ ಸರವನ್ನು ವಿಶೇಷವಾಗಿ ಮದುಮಗಳಿಗೆ ಅಥವಾ ಇನ್ನಿತರ ವಿಶೇಷ ಸಂದರ್ಭದಲ್ಲಿ ಮನೆಯ ಹೆಂಗಸರಿಗೆ ಮನೆಯ ಯಜಮಾನ ತನ್ನ ಪೆಟ್ಟಿಗೆಯಿಂದ ತೆಗೆದು ಹಾಕಿಕೊಳ್ಳುವುದಕ್ಕೆ ಕೊಡುತ್ತಾನೆ. ಕಾರ್ಯಕ್ರಮ ಮುಗಿದ ತತ್‌ಕ್ಷಣ ಅದನ್ನು ತೆಗೆದು ಮನೆಯ ಹೆಂಗಸರು ಯಜಮಾನನ ಕೈಗೆ ಕೊಡಬೇಕು. ಕಿವಿಗೆ ಬೆಂಡೋಲೆ, ಕಿವಿಯ ಮೇಲೆ ಧರಿಸುವ ಲವಂಗ ಎನ್ನುವ ಆಭರಣ, ಮುಗುಳಿ ಸರಪಳಿಯನ್ನು ಕುಡುಬಿಯರು ಧರಿಸುತ್ತಿದ್ದರು. ಮೂಗಿಗೆ ಮೂಗುತಿಯನ್ನು ಧರಿಸಿಕೊಳ್ಳುವರು. ಇದರ ಗಾತ್ರ ತುಂಬ ದೊಡ್ಡದಾಗಿದ್ದು, ವಿಶಿಷ್ಟ ರೀತಿಯಲ್ಲಿ ಇದು ನಿರ್ಮಾಣ ಆಗಿದೆ. ಈ ರೀತಿಯ ಮೂಗುತಿಯನ್ನು ಇವತ್ತು ಕೂಡ ಕುಡುಬಿ ಹೆಂಗಸರು ಬಳಸುತ್ತಿರುವುದು ಕಂಡುಬರುತ್ತದೆ.

ಕುಡುಬಿ ಗಂಡಸರು ಕಿವಿಗೆ ಮುರು ಎನ್ನುವ ಆಭರಣವನ್ನು ಧರಿಸುತ್ತಾರೆ. ಹಿಂದೆ ಮಾನ ಮುಚ್ಚಿಕೊಳ್ಳುವುದಕ್ಕಾಗಿ ಲಂಗೋಟಿಯನ್ನು ಧರಿಸುತ್ತಿದ್ದರು. ಮೈಮೇಲೆ ತೆಳುವಾದ ಉದ್ದ ಅಂಗಿಯನ್ನು ಧರಿಸುತ್ತಾರೆ. ಇವರ ವೃತ್ತಿ ಬೇಸಾಯವಾಗಿರುವುದರಿಂದ ತಲೆಗೆ ದಿನದ ಹೆಚ್ಚಿನ ಹೊತ್ತು ಅಡಿಕೆ ಹಾಳೆಯಿಂದ ತಯಾರಿಸಿದ ಮುಟ್ಟಾಳೆಯನ್ನು ಧರಿಸುತ್ತಾರೆ. ಹಿಂದೆ ಗಂಡಸರು ಹೆಂಗಸರಂತೆ ಉದ್ದನೆಯ ತಲೆಗೂದಲನ್ನು ಇಟ್ಟುಕೊಳ್ಳುತ್ತಿದ್ದರು. ಅದನ್ನು ಜುಟ್ಟು ಕಟ್ಟಿ ಅದಕ್ಕೆ ಹೂವನ್ನು ಮುಡಿಯುತ್ತಿದ್ದರು ಎನ್ನುವಂತಹ ಮಾಹಿತಿಗಳೂ ಕೂಡ ಸಿಗುತ್ತವೆ. ಅಲ್ಲದೆ, ಹಿಂದೆ ತಲೆಕೂದಲನ್ನು ಕತ್ತರಿಸಿದ ಗಂಡಸರಿಗೆ ದಂಡ ಹಾಕುತ್ತಿದ್ದರು ಎನ್ನುವ ವಿಷಯಗಳೂ ದೊರೆಯುತ್ತವೆ. ಹೆಂಗಸರ ಉಡುಗೆತೊಡುಗೆಗಳಲ್ಲಿ ವಿಶಿಷ್ಟವಾಗಿ ಗಮನಿಸುವ ಅಂಶವೆಂದರೆ ಅವರು ಸೀರೆ ಉಡುವ ಕ್ರಮ. ಇದನ್ನು ‘ಗೇಂಟಿ’ ಎಂದು ಅವರ ಭಾಷೆಯಲ್ಲಿ ಕರೆಯುತ್ತಾರೆ. ಸೀರೆಯನ್ನು ಬಲದಿಂದ ಎದೆಯ ಮೇಲೆ ಭುಜದ ಬಳಿ ಗಂಟು ಬರುವಂತೆ ಮೇಲು ಹೊದಿಕೆಯಾಗಿ ಉಡುತ್ತಾರೆ. ಇದು ಮೊಣಗಂಟಿನ ತನಕ ಮಾತ್ರ ಇರುತ್ತದೆ. ಇದು ಅವರ ಸಂಪ್ರದಾಯದ ಉಡುಪು. ಎ. ಪಿ. ನಾವಡ ಅವರು ತಮ್ಮ ‘ಕೊಂಕಣದ ಕುಡುಬಿಯರು’ ಎನ್ನುವ ಪುಸ್ತಕದಲ್ಲಿ (ಪುಟ ಸಂಖ್ಯೆ ೨೨) ಗೇಂಟಿ ಹಾಕಿ ಸೀರೆ ಉಡುವ ಪದ್ಧತಿಯನ್ನು ಕೈಬಿಟ್ಟದ್ದಕ್ಕೆ ೧೯೬೪ರಲ್ಲಿ ಉಡುಪಿ ತಾಲೂಕಿನ ಒಂದು ಗ್ರಾಮದ ಮಹಿಳೆಯರ ವಿರುದ್ಧ ಕುಂದಾಪುರ ನ್ಯಾಯಾಲಯದಲ್ಲಿ ಫಿರ್ಯಾದಿ ಹೂಡಿದ್ದನ್ನು ತಿಳಿಸಿದ್ದಾರೆ. ಇದಕ್ಕೆ ನ್ಯಾಯಾಧೀಶರು ಇದು ಖಾಸಗಿ ಸಂಗತಿಯೆಂದು, ವೈಯಕ್ತಿಕ ನೆಲೆಯಲ್ಲಿ ತಮ್ಮ ವೇಷಭೂಷಣಗಳ ಬದಲಾವಣೆಗೆ ವ್ಯಕ್ತಿಗೆ ಸ್ವಾತಂತ್ರ್ಯ ಇದೆ ಎಂಬುದಾಗಿ ತೀರ್ಪು ಕೊಟ್ಟರು. ಇದರಿಂದ ತಿಳಿಯುವುದೇನೆಂದರೆ, ಕುಡುಬಿಯರಲ್ಲಿ ಕೆಲವರು ಬದಲಾವಣೆಗಳನ್ನು ಬಯಸಿದರೆ ಇನ್ನೂ ಕೆಲವರು ತಮ್ಮ ಹಳೆಯ ಪದ್ಧತಿಗಳನ್ನು ಉಳಿಸಿಕೊಳ್ಳುವ ಪ್ರಯತ್ನಗಳನ್ನು ಮಾಡುತ್ತಿರುವುದು ಕಂಡುಬರುತ್ತದೆ. ಇಂದಿಗೂ ಕೆಲವು ಸಂಪ್ರದಾಯಸ್ಥ ಕುಟುಂಬಗಳಲ್ಲಿ ಗೇಂಟಿ ಉಡುವ ಕ್ರಮ ಇರುವುದನ್ನು ಕಾಣಬಹುದು.

ಇವರು ಗೇಂಟಿಯನ್ನು ಉಡುವಾಗ ರವಕೆ ಹಾಕುವ ಕ್ರಮ ಇಲ್ಲ. ಮದುವೆಯ ದಿನ ಮದುಮಗಳಿಗೆ ಒಂದು ಬಾರಿ ಮಾತ್ರ ರವಕೆಯನ್ನು ಹಾಕಿ ಸೀರೆ ಉಡಿಸುತ್ತಾರೆ. ಮದುವೆಯ ಶಾಸ್ತ್ರಗಳು ಮುಗಿದ ಅನಂತರ ಆಕೆಯನ್ನು ಗಂಡನ ಮನೆಯವರು ಗೇಂಟಿಯನ್ನು ಹಾಕಿ ಸೀರೆ ಉಡಿಸುತ್ತಾರೆ. ಇದರ ಕುರಿತು ಮಾಹಿತಿಯನ್ನು ಸಂಗ್ರಹಿಸಿದಾಗ ಗೋವೆಯ ಅಮ್ಮ ರವಕೆಯನ್ನು ತೊಟ್ಟುಕೊಳ್ಳುತ್ತಾಳೆ. ನಾವು ರವಕೆಯನ್ನು ತೊಟ್ಟುಕೊಂಡರೆ ಅವಳಿಗೆ ಅವಮಾನ ಮಾಡಿದ ಹಾಗೆ ಎನ್ನುವುದು ಅವರ ಉತ್ತರ. ಈ ರೀತಿ ಮದುವೆಗೆ ಹಾಕಿ ತೆಗೆದಿಟ್ಟ ರವಕೆಯನ್ನು ಆಕೆಯ ಗಂಡ ಹೋಳಿ ಕುಣಿತದ ದಿನ ಧರಿಸಿಕೊಳ್ಳುತ್ತಾನೆ.

ಆದರೆ, ನಾಗರೀಕತೆಯ ಪ್ರಭಾವದಿಂದ ಈ ಮೇಲೆ ತಿಳಿಸಿರುವ ಉಡುಗೆತೊಡುಗೆಗಳ ವಿಚಾರದಲ್ಲಿ ಬಹಳಷ್ಟು ಮಾರ್ಪಾಡುಗಳಾಗಿವೆ. ಮೈಬಣ್ಣದಿಂದ ಕಪ್ಪಾಗಿರುವ ಕುಡುಬಿಯರು ಇಂದು ಅನೇಕ ತಲೆಮಾರುಗಳ ಜೀವನವನ್ನು ನಡೆಸಿರುವುದರಿಂದ ಅವರ ಬಣ್ಣವೂ, ರೂಪವೂ

ಬದಲಾಗಿರುವುದನ್ನು ಗಮನಿಸಬಹುದು. ಉಡುಗೆಯಲ್ಲಿಯೂ ತೊಡುಗೆಯಲ್ಲಿಯೂ ಈಗಿನ ಕ್ರಮಗಳನ್ನೇ ಕಾಣುತ್ತೇವೆ. ಅಲ್ಲಲ್ಲಿ ಕೆಲವು ಹಳೆಯ ತಲೆಮಾರಿನವರನ್ನು, ಅಂದರೆ, ಪ್ರಾಯದ ವೃದ್ಧೆಯರನ್ನು ಬಿಟ್ಟರೆ ಉಳಿದವರೆಲ್ಲ ರವಕೆ ಧರಿಸಿ ಆಧುನಿಕ ರೀತಿಯಲ್ಲಿಯೇ ಸೀರೆಯನ್ನು ಉಡುತ್ತಾರೆ. ಮದುವೆಯಂದೇ ವಿಶೇಷವಾಗಿ ಮುಡಿಯುತ್ತಿದ್ದ ಕನಕಾಂಬರ ಹೂವನ್ನು ಇಂದು ಮದುವೆಯಾಗದ ಹೆಣ್ಣುಮಕ್ಕಳು ಮುಡಿಯುತ್ತಿರುವುದು ಕಂಡುಬರುತ್ತದೆ.

## ವಸತಿ:

ಕುಡುಬಿಯರು ಹೆಚ್ಚಾಗಿ ಗುಂಪಾಗಿ ವಾಸಿಸುತ್ತಿರುವುದು ಕಂಡುಬರುತ್ತದೆ. ಇವರೆಲ್ಲ ಒಂದೇ ಮೂಲದಿಂದ ಮತ್ತು ದಬ್ಬಾಳಿಕೆಗೆ ಹೆದರಿ ವಲಸೆ ಬಂದಿರುವುದರಿಂದ ಆ ಭಯ ಅವರನ್ನು ಒಟ್ಟಾಗಿ ಬದುಕುವಲ್ಲಿ ಪ್ರೇರಣೆಯನ್ನು ನೀಡಿತು ಎನ್ನಬಹುದು. ನೀರಿನ ಆಶ್ರಯವಿರುವ ಕಡೆಗಳಲ್ಲಿ ಗುಡಿಸಲುಗಳನ್ನು ಕಟ್ಟಿ ಗುಡ್ಡಗಳನ್ನು ಕಡಿದು, ಗದ್ದೆಗಳನ್ನು ನಿರ್ಮಿಸಿ, ಬೇಸಾಯವನ್ನು ವೃತ್ತಿಯನ್ನಾಗಿಸಿ ವಾಸಮಾಡಲು ತೊಡಗಿದ್ದಾರೆ. ಇವರ ಮನೆಗಳನ್ನು 'ಘರ್' ಎಂದು ಕರೆಯುತ್ತಾರೆ. ಇದನ್ನು ಬಿದಿರು, ಹುಲ್ಲು ಮತ್ತು ಮಣ್ಣಿನ ಸಹಾಯದಿಂದ ನಿರ್ಮಿಸುತ್ತಾರೆ. ಮಣ್ಣಿನ ಗೋಡೆಗೆ ಬಿದಿರು ಮತ್ತು ಹುಲ್ಲಿನ ಛಾವಣಿಯನ್ನು ಹಾಕುತ್ತಾರೆ. ಇವರ ಮನೆಗಳಲ್ಲಿ ಎರಡರಿಂದ ಮೂರು ಕೋಣೆಗಳಿರುತ್ತವೆ. ಇವರು ಗುಂಪಾಗಿ ವಾಸಿಸುವುದರಿಂದ ನಡುವೆ ಅಂಗಳ ಬರುವಂತೆ ಚೌಕಾಕಾರವಾಗಿ ಮನೆಗಳನ್ನು ನಿರ್ಮಿಸುತ್ತಾರೆ. ಈ ಗುಂಪಿನಲ್ಲಿ ಒಬ್ಬ ಯಜಮಾನ ಇರುತ್ತಾನೆ. ಆತನ ಮನೆ ಉಳಿದ ಕುಡುಬಿಯರ ಮನೆಗಿಂತ ದೊಡ್ಡದಾಗಿರುತ್ತದೆ. ಈತನ ಮನೆಮುಂದೆ ತುಳಸಿಕಟ್ಟೆ ಇರುತ್ತದೆ. ಮತ್ತು ಮನೆಯೊಳಗಡೆ ಗೋವೆಯ ದೇವರ ಆರಾಧನೆಗಾಗಿ ಒಂದು ಪ್ರತ್ಯೇಕ ಕೋಣೆಯ ನಿರ್ಮಾಣ ಇದೆ. ಕುಡುಬಿಯರು ಹಬ್ಬಹರಿದಿನಗಳನ್ನು ಎಲ್ಲರೂ ಒಟ್ಟು ಸೇರಿ ಆಚರಿಸುವುದರಿಂದ ಆ ದಿನ ಯಜಮಾನನ ಮನೆಯ ಎದುರು ಇರುವ ತುಳಸಿಕಟ್ಟೆಯ ಹತ್ತಿರ ಎಲ್ಲರೂ ಸೇರಿ ಪೂಜೆ ಯನ್ನು ನೆರವೇರಿಸುತ್ತಾರೆ. ಇವರಲ್ಲಿ ಪ್ರತ್ಯೇಕ ಸ್ನಾನಗೃಹಗಳಿರುವುದಿಲ್ಲ. ತೆಂಗಿನ ಮರದ ಬುಡದಲ್ಲಿ ಅಥವಾ ಬಸಳೆ, ತೊಂಡೆ ಚಪ್ಪರದ ಹತ್ತಿರ ಸ್ನಾನವನ್ನು ಮಾಡುತ್ತಾರೆ.

ಆದರೆ, ಇತ್ತೀಚೆಗೆ ಮನೆ, ವಿದ್ಯುಚ್ಛಕ್ತಿ, ಪಾಯಿಖಾನೆ ಮೊದಲಾದ ಸರಕಾರದ ಸವಲತ್ತುಗಳು ಇವರಿಗೆ ದೊರಕಿವೆ. ಹಾಗಾಗಿ ಇಂದು ಹುಲ್ಲಿನ ಮನೆಗಳ ಸಂಖ್ಯೆ ಬಹಳಷ್ಟು ಕಡಿಮೆಯಾಗಿ ಹಂಚಿನ ಮನೆಗಳು ಹೆಚ್ಚಾಗಿ ಕಂಡುಬರುತ್ತವೆ. ಆದರೆ ಹುಲ್ಲಿನ ಮನೆಗಳೂ ಸಂಪೂರ್ಣವಾಗಿ ಕಣ್ಮರೆಯಾಗಿಲ್ಲ; ಇಂದಿಗೂ ಅನೇಕ ಕಡೆಗಳಲ್ಲಿ ಹುಲ್ಲಿನ ಮನೆಗಳಲ್ಲಿ, ವಿದ್ಯುಚ್ಛಕ್ತಿಯ ಅಭಾವದಿಂದ ಬದುಕುತ್ತಿರುವ ಕುಡುಬಿಯರನ್ನು ಕಾಣಬಹುದು. ಈ ನಿಟ್ಟಿನಲ್ಲಿ ಸರಕಾರ ಇವರನ್ನು ಪರಿಶಿಷ್ಟ ವರ್ಗಕ್ಕೆ ಸೇರಿಸಿಕೊಂಡು ದೊರೆಯುವ ಎಲ್ಲ ಸವಲತ್ತುಗಳಿಗೆ ಇವರನ್ನು ಭಾಗಿದಾರರನ್ನಾಗಿ ಮಾಡಬೇಕಾದ ದೊಡ್ಡ ಜವಾಬ್ದಾರಿ ಸರಕಾರದ ಮುಂದಿದೆ.

## ಕುಟುಂಬವ್ಯವಸ್ಥೆ:

ಕುಡುಬಿಯರದ್ದು ಪಿತೃಮೂಲೀಯ ಕುಟುಂಬ ವ್ಯವಸ್ಥೆ. ಗಂಡುಮಕ್ಕಳಿಗೆ ಅಧಿಕಾರ ಹೆಚ್ಚು. ಮದುವೆಯಾದ ಹೆಣ್ಣುಮಕ್ಕಳಿಗೆ ತಾಯಿಮನೆಯಲ್ಲಿ ಯಾವುದೇ ಅಧಿಕಾರವಿಲ್ಲ. ಆದರೆ, ಮದುವೆಯಾಗಿ ಮನೆತುಂಬಿಸಿಕೊಂಡ ಹೆಣ್ಣಿಗೆ ಕೆಲವು ಅಧಿಕಾರಗಳನ್ನು ಕೊಡುತ್ತಾರೆ. ಕೊಟ್ಟ ಹೆಣ್ಣು ಕುಲಕ್ಕೆ ಹೊರಗು ಎನ್ನುವ ಭಾವನೆಗಳು ಕುಡುಬಿಯರಲ್ಲಿ ಇರುವುದು ಕಂಡುಬರುತ್ತದೆ. ಇಂದಿಗೂ ಇವರಲ್ಲಿ ಮದುವೆ ಮಾಡಿ ಕೊಟ್ಟ ಹೆಣ್ಣಿಗೆ ಯಾವುದೇ ಅಧಿಕಾರಗಳು ಇರದೆ ಇರುವುದನ್ನು ಕ್ಷೇತ್ರಕಾರ್ಯದ ಮೂಲಕ ತಿಳಿದುಕೊಳ್ಳಲಾಗಿದೆ.

ಕುಟುಂಬದ ಹಿರಿಯರಿಗೆ ತುಂಬಾ ಗೌರವ. ಯಾವುದೇ ಶುಭಕಾರ್ಯಗಳಿಗೆ ಅಥವಾ ಹಬ್ಬಹರಿದಿನಗಳನ್ನು ಮಾಡಬೇಕಾದರೂ ಈತನೇ ದಿನವನ್ನು ನಿರ್ಧಾರ ಮಾಡುತ್ತಾನೆ. ಇವರಲ್ಲಿ ಆಸ್ತಿಯನ್ನು ತಂದೆ ತನ್ನ ಗಂಡುಮಕ್ಕಳಿಗೆ ಬೇಗನೆ ಹಂಚುವುದಿಲ್ಲ. ತನ್ನ ಎಲ್ಲ ಮಕ್ಕಳಿಗೆ ಮದುವೆ ಯಾದ ಅನಂತರ ಕುಟುಂಬದ ಹಿರಿಯ ಮಗನಿಗೆ ತನ್ನ ಅಧಿಕಾರವನ್ನು ವರ್ಗಾಯಿಸಬಹುದು. ಹೀಗೆ ಹಿರಿಯರಿಂದ ಹಿರಿಯರಿಗೆ ಅಧಿಕಾರ ಹಸ್ತಾಂತರವಾಗುವುದನ್ನು ಕಾಣಬಹುದು.

## ನ್ಯಾಯತೀರ್ಮಾನ:

ಕುಡುಬಿಯರಲ್ಲಿ ಕುಟುಂಬದೊಳಗಿನ ಯಾವುದೇ ಕಲಹಗಳಿದ್ದಲ್ಲಿ ಯಜಮಾನನೇ ಅದಕ್ಕೆ ನ್ಯಾಯತೀರ್ಮಾನವನ್ನು ಮಾಡುತ್ತಾನೆ. ಇವರಲ್ಲಿ ಕೋರ್ಟು ಕಚೇರಿ ಹತ್ತುವ ಕ್ರಮವೇ ಇಲ್ಲ. ಇವರಲ್ಲಿ ಯಾರಾದರೂ ಅತ್ಯಾಚಾರಗಳನ್ನು ಮಾಡಿದ್ದಲ್ಲಿ ಅಂತಹವರನ್ನು ಎಂಜಲು ಎಲೆಗಳನ್ನು ಅವನ ಬಿಸಾಡುವುದರ ಮೂಲಕ ಶಿಕ್ಷೆಯನ್ನು ನೀಡುತ್ತಿದ್ದರು.

ಈ ರೀತಿಯಾಗಿ ವಿಭಿನ್ನ ನೆಲೆಗಳಲ್ಲಿ ಹಲವು ರೀತಿಯ ವೈಶಿಷ್ಟ್ಯಗಳನ್ನು ಹೊಂದಿರುವ ಕುಡುಬಿ ಜನಾಂಗವು ಇತರ ಜನಾಂಗಗಳಿಗಿಂತ ಬಹಳಷ್ಟು ರೀತಿನೀತಿಗಳಲ್ಲಿ ಭಿನ್ನತೆಯನ್ನು ಹೊಂದಿದ್ದಾರೆ. ಅನೇಕ ದಶಕಗಳ ಬದುಕನ್ನು ಕರ್ನಾಟಕದ ಸ್ಥಳೀಯ ಸಂಸ್ಕೃತಿಯ ಜೊತೆಗೆ ಮೇಳೈಸಿಕೊಂಡು ಬದುಕುತ್ತಿದ್ದರೂ ತಮ್ಮ ಮೂಲ ಸಂಸ್ಕೃತಿಯನ್ನು ಅಷ್ಟಿಷ್ಟು ಉಳಿಸಿಕೊಂಡು ಬಂದಿರುವುದು ಕಂಡುಬರುತ್ತದೆ.

* * *

ಅಧ್ಯಾಯ ಮೂರು

# ಕುಡುಬಿಯರ ಮದುವೆ ಸಂಬಂಧಿ ಆಚರಣೆಗಳು

# ಮತ್ತು

# ಮದುವೆ ಹಾಡುಗಳು

ಕುಡುಬಿಯರ ಆಚರಣ ಪದ್ಧತಿಯನ್ನು ವಾರ್ಷಿಕಾವರ್ತನ ಮತ್ತು ಜೀವನಾವರ್ತನ ಎಂದು ಎರಡು ರೀತಿಯಲ್ಲಿ ವಿಂಗಡಿಸಿ ಅಧ್ಯಯನವನ್ನು ಮಾಡಬಹುದು. ವಾರ್ಷಿಕಾವರ್ತನ ಆಚರಣೆಗಳು ವರ್ಷಕ್ಕೆ ಒಂದು ಬಾರಿ ವಿಶಿಷ್ಟ ದಿನದಂದು ಆಚರಿಸಲ್ಪಡುತ್ತವೆ. ಉದಾಹರಣೆಗಳು, ಹೋಳಿ ಹಬ್ಬ, ಆಟಿ ಅಮಾವಾಸ್ಯೆ, ದೀಪಾವಳಿ, ಹೊಸತುಅಕ್ಕಿ ಊಟ ಇತ್ಯಾದಿ. ಜೀವನಾವರ್ತನ ಆಚರಣೆಗಳಲ್ಲಿ ಹುಟ್ಟು, ನಾಮಕರಣ, ಋತು, ಮದುವೆ, ಸೀಮಂತ, ಸಾವಿನ ಆಚರಣೆ, ಕೊಲೆಹಬ್ಬ ಇವು ಮುಖ್ಯವಾದವು. ಈ ಮೇಲಿನ ಆಚರಣೆಗಳು ಇಂದು ನಾಗರಿಕ ಪ್ರಪಂಚದ ಪ್ರಭಾವಕ್ಕೆ ಒಳಗಾಗಿ, ಆಚರಣೆಗಳಲ್ಲಿ ಸಂಪ್ರದಾಯ ರೀತಿ ನೀತಿಗಳಲ್ಲಿ ಬಹಳಷ್ಟು ಬದಲಾವಣೆಗಳನ್ನು ಕಂಡಿವೆ. ಕುಡುಬಿಯರ ಜೀವನಾವರ್ತನ ಆಚರಣೆಗಳಲ್ಲಿ ಒಂದಾದ ಮದುವೆಯನ್ನು ಮುಖ್ಯವಾಗಿಟ್ಟುಕೊಂಡು ಮದುವೆಸಂಬಂಧಿ ಆಚರಣೆಗಳು ಮತ್ತು ಮದುವೆ ಹಾಡುಗಳ ಕುರಿತಾಗಿ ಅಧ್ಯಯನ ಮಾಡುವ ಉದ್ದೇಶವನ್ನು ಇಟ್ಟುಕೊಂಡು ಈ ಅಧ್ಯಯನವನ್ನು ನಡೆಸಲಾಗಿದೆ.

ಮದುವೆ ಮಾನವನ ದೈಹಿಕ ಮಾನಸಿಕ ಸಾಮಾಜಿಕ ಹಾಗೂ ಸಾಂಸ್ಕೃತಿಕ ಅವಶ್ಯಕತೆಗಳ ಪೂರೈಕೆಗಾಗಿ ಹುಟ್ಟಿಕೊಂಡಿದೆ. ಬಾಲ್ಯವನ್ನು ಕಳೆದು ಪ್ರೌಢಾವಸ್ಥೆಗೆ ಬಂದಾಗ ಮನೆಯ ಹಿರಿಯರು ಗೊತ್ತುಮಾಡಿದ ಹೆಣ್ಣಿನ ಜೊತೆಗೆ ಜವಾಬ್ದಾರಿಯುತ ಬದುಕನ್ನು ನಡೆಸುವ ಮೊದಲ ಘಟ್ಟವೇ ಮದುವೆ. ಹೀಗಾಗಿ ಮಾನವನ ಬದುಕಿನಲ್ಲಿ ಮದುವೆಗೆ ವಿಶೇಷ ಪ್ರಾಶಸ್ತ್ಯಗಳಿರುವುದನ್ನು ಕಾಣಬಹುದು. ಭಾರತೀಯ ಸಮಾಜದಲ್ಲೂ ಕೂಡ ಮದುವೆಗೆ ವಿಶೇಷವಾದ ಮಹತ್ತ್ವ ಪಾವಿತ್ರ್ಯ ಗಳಿವೆ.

ಬೇರೆ ಬೇರೆ ಸಂಸ್ಕೃತಿಗಳ ಆಗರವಾಗಿರುವ ಭಾರತದಲ್ಲಿ ಪ್ರತಿಯೊಂದು ಸಮಾಜದಲ್ಲೂ ಮದುವೆಗೆ ಸಂಬಂಧಿಸಿದ ಆಚರಣೆಗಳು ಭಿನ್ನವಾಗಿದ್ದು ಕಾಲದಿಂದ ಕಾಲಕ್ಕೆ ಬದಲಾವಣೆಗಳೊಂದಿಗೆ

ಹೊಸತನವನ್ನು ಮೈಗೂಡಿಸಿಕೊಂಡು ಬೆಳೆದು ಬಂದಿರುವುದನ್ನು ಗಮನಿಸಬಹುದು. ಇಂತಹ ಸಮಾಜದಲ್ಲಿ ಗೋವೆಯಿಂದ ಬಂದು ಕರ್ನಾಟಕದಲ್ಲಿ ಕರಾವಳಿ ಪ್ರದೇಶದ ದಟ್ಟವಾದ ಕಾಡುಗಳಲ್ಲಿ ನೆಲೆನಿಂತ ಕುಡುಬಿಯರ ಮದುವೆ ಸಂಬಂಧಿ ಆಚರಣೆಗಳು ಸಂಶೋಧಕರಿಗೆ ಅಧ್ಯಯನಯೋಗ್ಯ ವಿಷಯವಾಗಿದೆ. ಕುಡುಬಿಯರು ತಮ್ಮ ವೇಷಭೂಷಣಗಳಿಂದ ಉಳಿದ ಬುಡಕಟ್ಟು ಜನಾಂಗಗಳಿಗಿಂತ ಭಿನ್ನರಾಗಿ ಕಾಣುವಂತೆ, ಮದುವೆ ಸಂಬಂಧಿ ಆಚರಣೆ ಮತ್ತು ಅವರ ಮದುವೆಗಳಲ್ಲಿ ಹಾಡುತ್ತಿದ್ದ ಹಾಡುಗಳ ಮೂಲಕವೂ ಬಹಳಷ್ಟು ಭಿನ್ನತೆಯನ್ನು ಹೊಂದಿದ್ದಾರೆ.

ಕುಡುಬಿಯರು ಒಂದು ನಿರ್ದಿಷ್ಟ ಪ್ರದೇಶದಲ್ಲಿ ವಾಸ ಮಾಡುವುದರಿಂದ ಅವರಲ್ಲಿ ಅನೇಕ ಆಚರಣೆಗಳನ್ನು ಎಲ್ಲರೂ ಒಟ್ಟು ಸೇರಿ ಮಾಡುತ್ತಾರೆ. ಕುಡುಬಿಯರಿಗೆ ವಿವಾಹ ಎನ್ನುವಂತಹುದು ಬಾಂಧವ್ಯ, ಸಂಬಂಧಗಳ ಗಟ್ಟಿತನ ಆಗಿದೆ. ಅವರಲ್ಲಿ ಮದುವೆಯನ್ನು 'ವಡ್ಡಿಗ್', 'ವರ್ಡಿಕ್', 'ಹೊರೊಡ್' ಎಂದು ಕರೆಯುತ್ತಾರೆ.

ಕುಡುಬಿಯರಲ್ಲಿ ಹಿಂದೆ ಮದುವೆಗಳು ನಾಲ್ಕು ಐದು ದಿನಗಳವರೆಗೆ ನಡೆಯುತ್ತಿದ್ದವು ಎಂದು ತಿಳಿದುಬರುತ್ತದೆ. ಇವರಲ್ಲಿ ಮದುವೆಯ ಗಂಡು ಮತ್ತು ಹೆಣ್ಣು ಪರಸ್ಪರ ನೋಡಿ ಒಪ್ಪಿಗೆಯನ್ನು ಸೂಚಿಸುವ ಕ್ರಮವೇ ಇಲ್ಲ. ಹುಡುಗ ಮತ್ತು ಹುಡುಗಿಯ ತಂದೆತಾಯಿಗಳು ಪರಸ್ಪರ ಹುಡುಗ-ಹುಡುಗಿಯನ್ನು ನೋಡಿ ತಮ್ಮ ಒಪ್ಪಿಗೆಯನ್ನು ಸೂಚಿಸುತ್ತಿದ್ದರು. ತಂದೆತಾಯಿಗಳಿಗೆ ಒಪ್ಪಿಗೆಯಾದಲ್ಲಿ ಮದುವೆ ನಿಶ್ಚಯವಾಗುತ್ತಿತ್ತು. ವೀಳ್ಯಪಟ್ಟಿಯನ್ನು ಅದಲುಬದಲು ಮಾಡುವುದರ ಮೂಲಕ ನಿಶ್ಚಯ ಮಾಡುತ್ತಿದ್ದರು. ಇದನ್ನು ಅವರ ಭಾಷೆಯಲ್ಲಿ 'ಈಡೊ', 'ಸಾಕ್ಷಿ ಈಡೊ' ಎಂದು ಕರೆಯುತ್ತಾರೆ. ಎಂದರೆ ವೀಳ್ಯದೆಲೆ ಮತ್ತು ಅಡಕೆಯನ್ನು ಒಟ್ಟು ಸೇರಿಸಿ ಹುಡುಗನ ತಂದೆ ಹುಡುಗಿಯ ತಂದೆಯ ಕೈಗೆ ಕೊಟ್ಟು 'ನಿಮ್ಮ ಹುಡುಗಿಯನ್ನು ನಮ್ಮ ಮಗನಿಗೆ ಮದುವೆ ಮಾಡಿಸಿಕೊಳ್ಳುತ್ತೇವೆ. ಇಂದಿನಿಂದ ನಿಮ್ಮ ಮಗಳು ನಮ್ಮ ಮಗನಿಗೆ ಮದುವೆಯಾಗಿ ತರುವ ಹೆಣ್ಣಾಗಿದ್ದಾಳೆ' ಎಂದು. ಈ ಭರವಸೆಯನ್ನು ಕೊಟ್ಟಮೇಲೆ ಹುಡುಗನ ಕಡೆಯವರು ಹುಡುಗಿಯ ಮನೆಯಲ್ಲಿ ಊಟ ಮಾಡುತ್ತಾರೆ. ಸಂಬಂಧಗಳು ಏರ್ಪಡುವ ಸಂಕೇತವಾಗಿ ಊಟ ಇಲ್ಲಿ ಕೆಲಸ ಮಾಡುವುದನ್ನು ಕಾಣಬಹುದು. ಸಂಬಂಧಗಳು ಏರ್ಪಡದಿದ್ದರೆ ಮತ್ತು ಏರ್ಪಡುವವರೆಗೆ ಅವರು ಹೆಣ್ಣಿನ ಮನೆಯಲ್ಲಿ ಊಟ ಮಾಡುವುದಿಲ್ಲ. ಹೆಣ್ಣನ್ನು ಆಯ್ಕೆ ಮಾಡುವಾಗ ಕೆಲವೊಂದು ಪ್ರಮುಖ ಅಂಶಗಳನ್ನು ಗಮನದಲ್ಲಿರಿಸಿ ಆಯ್ಕೆ ಮಾಡಿಕೊಳ್ಳುತ್ತಿದ್ದುದು ಕಂಡುಬರುತ್ತದೆ. ಇವರ ವೃತ್ತಿ ವ್ಯವಸಾಯ ಆಗಿರುವುದರಿಂದ ಗದ್ದೆಗಳಲ್ಲಿ ದುಡಿಯುವ ಸಾಮರ್ಥ್ಯವುಳ್ಳ ಗಟ್ಟಿಮುಟ್ಟು ಮೈಕಟ್ಟಿನ ಹುಡುಗಿಯನ್ನು ಆಯ್ಕೆ ಮಾಡುತ್ತಿರುವುದು ಕಂಡುಬರುತ್ತದೆ. ಹೆಣ್ಣಿನ ತಂದೆತಾಯಿಗಳು ಕೂಡ ತಮ್ಮ ಅಳಿಯನಾದವನನ್ನು ಆಯ್ಕೆ ಮಾಡುತ್ತಿದ್ದ ಮಾಹಿತಿಗಳು ಕೆಲವೊಂದು ವೈಶಿಷ್ಟ್ಯದಿಂದ ಕೂಡಿದೆ. ತಮ್ಮ ಮಗಳಿಗೆ ಯೋಗ್ಯನಾದ ವರನ ಅನ್ವೇಷಣೆಗಾಗಿ ಹುಡುಗಿಯ ತಂದೆತಾಯಿಗಳು ಕೆಲವೊಂದು ಸ್ಪರ್ಧೆಗಳನ್ನು ಇಟ್ಟು ಅವರಲ್ಲಿ

ಗೆದ್ದರೆ ಆತನಿಗೆ ತಮ್ಮ ಮಗಳನ್ನು ಕೊಡುತ್ತಿದ್ದರು. ಇಲ್ಲಿ ಹೋಳಿಕುಣಿತದ ಸ್ಪರ್ಧೆ ಮತ್ತು ಕಂಬಳಗದ್ದೆಯಲ್ಲಿ ಕೋಣಗಳನ್ನು ಕಟ್ಟಿ ಅದರ ಹಲಗೆಯನ್ನು ಏರಿ ಅವುಗಳನ್ನು ಓಡಿಸುವ ಸ್ಪರ್ಧೆ. ಈ ಎರಡೂ ಸ್ಪರ್ಧೆಗಳಲ್ಲಿ ಆತ ಗೆದ್ದುಬಂದರೆ ಮಾತ್ರ ತಮ್ಮ ಮಗಳನ್ನು ಮದುವೆ ಮಾಡಿಕೊಡಲು ಒಪ್ಪುತ್ತಿದ್ದರು. ಇವೆರಡು ಅವರ ಸಂಸ್ಕೃತಿಯ ಅವಿಭಾಜ್ಯ ಅಂಗಗಳಾಗಿ ಮೂಡಿಬಂದಿರುವುದನ್ನು ಗಮನಿಸಬಹುದು.

ಮದುವೆಯ ಸಂದರ್ಭದಲ್ಲಿ ಹೆಣ್ಣಿನ ತಾಯಿಗೆ ಯಾವುದೇ ಪ್ರಾಶಸ್ತ್ಯ ಇಲ್ಲದಿರುವುದು ಕಂಡುಬರುತ್ತದೆ. ಹೆತ್ತ ಮಗಳನ್ನು ಧಾರೆಯೆರೆಯುವ ಹಕ್ಕು ಬೇರೆ ಎಲ್ಲ ಜನಾಂಗಗಳಲ್ಲಿ ತಾಯಿಗೆ ಇರುವುದನ್ನು ಗಮನಿಸಬಹುದು. ಆದರೆ ಕುಡುಬಿಯರಲ್ಲಿ ತನ್ನ ಮಗಳ ಮದುವೆಗೆ ಬರುವ ಅವಕಾಶವೂ ತಾಯಿಗೆ ಇಲ್ಲ. ಹೆಣ್ಣಿನ ಧಾರೆಯನ್ನು ತಂದೆ ಅಥವಾ ಹಿರಿಯರು ಎರೆಯುತ್ತಾರೆ.

## ಮದುವೆ ವಯಸ್ಸು:

ಕುಡುಬಿಯರಲ್ಲಿ ಬಾಲ್ಯವಿವಾಹಗಳ ವಿವರ ಕಂಡುಬರುವುದಿಲ್ಲ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮಾಹಿತಿಯನ್ನು ಸಂಗ್ರಹಿಸಿದಾಗ ಹೆಚ್ಚಿನ ಮದುವೆಗಳು ಹದಿನಾರರಿಂದ ಇಪ್ಪತ್ತು ವರ್ಷದ ಒಳಗೆ ಹೆಣ್ಣು ಮತ್ತು ಗಂಡುಗಳಲ್ಲಿ ನಡೆದಿರುವುದನ್ನು ಕಾಣಬಹುದು. ಹಾಗಾಗಿ ಹೆಣ್ಣನ್ನು ಪ್ರಾಪ್ತ ವಯಸ್ಸಿನಲ್ಲಿ ಅಂದರೆ ಋತುಮತಿಯಾದ ಅನಂತರವೇ ಮದುವೆ ಮಾಡಿ ಕೊಡಲಾಗುತ್ತಿತ್ತು. ಮದುವೆ ಗಂಡು ವಯಸ್ಸಿನಲ್ಲಿ ಹೆಣ್ಣಿಗಿಂತ ದೊಡ್ಡವನೇ ಇರಬೇಕೆಂಬ ನಿಯಮವಿರಲಿಲ್ಲ. ವಯಸ್ಸು ಇವರ ವಿವಾಹ ಸಂಬಂಧ ಏರ್ಪಡಲು ಯಾವುದೇ ಅಡ್ಡಿಯನ್ನು ಉಂಟುಮಾಡುತ್ತಿರಲಿಲ್ಲ. ಆದರೆ ಇಂದು ವಿವಾಹದ ವಯಸ್ಸಿನ ವಿಷಯದಲ್ಲಿ ಬಹಳಷ್ಟು ಬದಲಾವಣೆಗಳು ಆಗಿರುವುದನ್ನು ಗಮನಿಸಬಹುದು. ಹುಡುಗಿಯರಿಗೆ ಸಾಮಾನ್ಯವಾಗಿ ೧೮ರಿಂದ ೨೧ ವರ್ಷ, ಹುಡುಗರಿಗೆ ೨೩ರಿಂದ ೨೮ ವರ್ಷದ ಒಳಗೆ ಮದುವೆ ಮಾಡುವ ಕ್ರಮ ರೂಢಿಗೆ ಬಂದಿದೆ.

## ಬಳಿಗಳ ವಿಚಾರ:

ಕುಡುಬಿಯರ ಮದುವೆಗಳಲ್ಲಿ ಬಳಿ ಬಹಳ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಪ್ರಬಂಧದ ವ್ಯಾಪ್ತಿಯಲ್ಲಿ ತಿಳಿಸಿರುವಂತೆ ಕುಡುಬಿಯಲ್ಲಿ ಸುಮಾರು ೬ ಒಳಪಂಗಡಗಳಿದ್ದು ೧೩೦ ಬಳಿಗಳಿವೆ ಎಂದು ಅಂದಾಜಿಸಲಾಗಿದೆ. ಈ ಬಳಿಗಳು ಅವರ ಮೂಲ ವೃತ್ತಿ ಬೇಸಾಯ ಮತ್ತು ವಾಸಿಸುವ ಪರಿಸರ, ಪ್ರಕೃತಿಯ ವಸ್ತುಗಳು, ಅವರ ಮೂಲಸ್ಥಳ ಮುಂತಾದವುಗಳ ಮೂಲಕ ಬೇರೆ ಬೇರೆ ಹೆಸರುಗಳಿಂದ ಸೂಚಿತವಾಗಿರುವುದನ್ನು ಗಮನಿಸಬಹುದು.

ಕುಡುಬಿಯರಲ್ಲಿ ಒಂದೇ ಬಳಿಯವರು ವಿವಾಹವಾಗುವುದಿಲ್ಲ. ಇವರು ಒಂದೇ ಬಳಿಯವರನ್ನು ರಕ್ತಸಂಬಂಧಿಗಳೆಂದು ಅವರ ನಡುವೆ ಮದುವೆಗಳನ್ನು ಏರ್ಪಡಿಸಬಾರದೆಂದು ಇಂದಿಗೂ ಬಲವಾಗಿ ನಂಬುತ್ತಾರೆ. ಹಾಗಾಗಿ, ಮದುವೆಗಳು ಎರಡು ಭಿನ್ನ ಬಳಿಗಳ ನಡುವೆ ನಡೆಯುತ್ತಿರುವುದು ಕಂಡುಬರುತ್ತದೆ.

## ವಧುದಕ್ಷಿಣೆ:

ಕುಡುಬಿಯರಲ್ಲಿ ಹೆಣ್ಣಿಗೆ 'ತೆರ' ನೀಡುವ ಪದ್ಧತಿ ಇತ್ತು. ಇದನ್ನು 'ತೆರಿಹಣ' ಎಂದು ಕರೆಯುತ್ತಾರೆ. ಮದುವೆ ನಿಶ್ಚಯದಲ್ಲಿ ಇದು ಬಹಳ ಮುಖ್ಯ ಪಾತ್ರ ವಹಿಸುತ್ತಿತ್ತು. ಕೆಲವೊಮ್ಮೆ ವಧುದಕ್ಷಿಣೆ ನೀಡುವ ಹಣದ ಕುರಿತು ಬಹಳಷ್ಟು ಚರ್ಚೆಗಳಾಗಿ ಮದುವೆ ನಿಶ್ಚಿತಾರ್ಥ ನಿಂತು ಹೋಗುತ್ತಿತ್ತು. ಈ ಹಣವನ್ನು 'ವರ'ದ (೧ ವರ=೪ ರೂಪಾಯಿ) ರೂಪದಲ್ಲಿ ನೀಡಲಾಗುತ್ತಿತ್ತು.

ಕುಡುಬಿಯರಲ್ಲಿ ಈ ಕ್ರಮ ಒಂದು ಸಂಪ್ರದಾಯ ಎಂಬಂತೆ ಇಂದಿಗೂ ಜಾರಿಯಲ್ಲಿದೆ. ವಧುದಕ್ಷಿಣೆಯು ಕೇವಲ ಹಣದ ರೂಪದಲ್ಲಿರದೆ ವಸ್ತುವಿನ ರೂಪದಲ್ಲಿ ಕೂಡ ಕೊಡುತ್ತಿದ್ದರು. ಆಭರಣಗಳು, ಅಕ್ಕಿಮುಡಿ, ತೆಂಗಿನಕಾಯಿ, ಹುಡುಗಿ ಬಳಸುವ ಶೃಂಗಾರಸಾಮಗ್ರಿಗಳನ್ನು ಅದು ಒಳಗೊಂಡಿತ್ತು. ಗಂಡಿನ ಕಡೆಯವರ ಯೋಗ್ಯತೆಗೆ ಅನುಗುಣವಾಗಿ ಇದು ಹೆಚ್ಚುಕಡಿಮೆ ಇರುತ್ತಿತ್ತು. ಡಾ। ವೈ. ರವೀಂದ್ರನಾಥ ರಾವ್ ಅವರು ತಮ್ಮ ಸಂಶೋಧನ ಪ್ರಬಂಧದಲ್ಲಿ ವಧುದಕ್ಷಿಣೆಯನ್ನು ಕುರಿತು ಹೀಗೆ ಹೇಳುತ್ತಾರೆ:

'ಕುಡುಬಿ ಹೆಣ್ಣುಮಕ್ಕಳು ಬುಟ್ಟಿಗಳನ್ನು ಹೆಣೆಯುವ, ಚಾಪೆಗಳನ್ನು ತಯಾರಿಸುವ, ತರಕಾರಿಗಳನ್ನು ಬೆಳೆಸಿ ಮಾರಾಟ ಮಾಡುವ ಕೆಲಸವನ್ನು ಮಾಡುತ್ತಿದ್ದು ಆರ್ಥಿಕವಾಗಿ ಕುಟುಂಬಕ್ಕೆ ಆಧಾರವಾಗುತ್ತಿದ್ದರು. ಹೀಗಿದ್ದ ಹೆಣ್ಣು ಮದುವೆಯಾಗಿ ಹೋಗುವುದರಿಂದ ಉಂಟಾಗುವ ನಷ್ಟವನ್ನು ತುಂಬಿಸಿಕೊಳ್ಳಲು ಈ ವಧುದಕ್ಷಿಣೆ ಕೊಡುವ ಪದ್ಧತಿ ಜಾರಿಗೆ ಬಂದಿದೆ' ಎನ್ನುತ್ತಾರೆ. ಇಂದು ಈ ವಧುದಕ್ಷಿಣೆಯ ಸ್ಥಾನದಲ್ಲಿ ವರದಕ್ಷಿಣೆ ದಾಳಿಯಿಟ್ಟು ಹೆಣ್ಣನ್ನು ಮದುವೆ ಮಾಡಲು ಬಹಳಷ್ಟು ಕಷ್ಟಪಡಬೇಕಾದ ಸಂದರ್ಭಗಳು ಬಂದೊದಗಿವೆ. ಇತ್ತೀಚೆಗೆ ತುಳುನಾಡಿನ ಕೆಲವು ಸಮಾಜದವರನ್ನು ನೋಡಿದರೆ, ಅವರಲ್ಲಿ ವರದಕ್ಷಿಣೆ ಯಾವ ಮಟ್ಟಕ್ಕೆ ಬೆಳೆದಿದೆಯೆಂದರೆ ಕೂಲಿಗಾರನಿಂದ ಹಿಡಿದು ಆಗರ್ಭಶ್ರೀಮಂತನ ವರೆಗೆ ಅವಿದ್ಯಾವಂತನಿಂದ ಹಿಡಿದು ವಿದ್ಯಾವಂತನ ವರೆಗೆ ಅವರವರ ಸ್ಥಾನಮಾನಗಳಿಗೆ ಅನುಗುಣವಾಗಿ ವರದಕ್ಷಿಣೆಯ ಹಣ ಲಕ್ಷದ ಮಿತಿಯನ್ನು ಮೀರಿರುವುದನ್ನು ಗಮನಿಸಬಹುದು.

ಬಹುಶಃ ವಧುದಕ್ಷಿಣೆ ನೀಡಿ ಹೆಣ್ಣನ್ನು ತರುತ್ತಿದ್ದ ಕುಡುಬಿಯರು ಇವರೆಲ್ಲರ ಪ್ರಭಾವದಿಂದ ವಧುದಕ್ಷಿಣೆಯನ್ನು ಕೇವಲ ಸಾಂಕೇತಿಕವಾಗಿಟ್ಟುಕೊಂಡು ಲಕ್ಷಗಟ್ಟಲೆ ವರದಕ್ಷಿಣೆಯನ್ನು ತೆಗೆದುಕೊಳ್ಳುವುದನ್ನು ಕಾಣಬಹುದು.

## ಮದುವೆ ನಿಶ್ಚಯ:

ಭಿನ್ನ ಬಳಿಗಳಲ್ಲಿ ಗಂಡು-ಹೆಣ್ಣುಗಳನ್ನು ಗೊತ್ತು ಮಾಡಿ ವಧುದಕ್ಷಿಣೆಯ ಮಾತುಗಳೆಲ್ಲ ಮುಗಿದು ಗಂಡು ಮತ್ತು ಹೆಣ್ಣಿನ ಕಡೆಯವರು ಪರಸ್ಪರ ಒಪ್ಪಿಗೆಯನ್ನು ಸೂಚಿಸಿದ ಅನಂತರ ಹುಡುಗನ ತಂದೆತಾಯಿ, ಹಿರಿಯರು, ಊರಿನ ಮುಖಂಡ (ಅವನನ್ನು 'ಗುರಿಕಾರ' ಅಥವಾ 'ಬುದ್ವಂತ' ಎಂದು ಕರೆಯುತ್ತಾರೆ.) ಇವರೆಲ್ಲ ಬೆಸಸಂಖ್ಯೆಯಲ್ಲಿ -ಹೆಚ್ಚಾಗಿ ಐದು ಜನ, ಯಾಕೆಂದರೆ ಐದು ಇವರಿಗೆ ಶುಭ ಸೂಚಕ ಸಂಖ್ಯೆ- ಹುಡುಗಿಯ ಮನೆಗೆ ಅಥವಾ ಹುಡುಗಿಯ ಊರಿನ ಗುರಿಕಾರನ ಮನೆಗೆ ಬಂದು ಮನೆದೇವರು, ಕುಲದೇವರನ್ನು ಪ್ರಾರ್ಥಿಸಿ ಒಂದು ಶುಭದಿನವನ್ನು ಮದುವೆ ದಿನವೆಂದು ನಿಶ್ಚಯಿಸುತ್ತಿದ್ದರು. ಇಂದು ವೈದಿಕರ ಹತ್ತಿರ ಮದುವೆದಿನಗಳನ್ನು ನಿಶ್ಚಯಿಸುತ್ತಿರುವುದನ್ನು ಕಾಣಬಹುದು. ಹಿಂದೆ ಮದುವೆಯ ದಿನಗಳನ್ನು ಹೆಚ್ಚಾಗಿ ಮಳೆಗಾಲದಲ್ಲಿಯೇ ಇಟ್ಟುಕೊಳ್ಳುತ್ತಿದ್ದು ಇವತ್ತಿಗೂ 'ಸೋಣೆ' (ಸಿಂಹಮಾಸ) ತಿಂಗಳಲ್ಲಿಯೇ ನಡೆಯುತ್ತಿರುವುದು ಕಂಡುಬರುತ್ತದೆ. ಮದುವೆಯ ದಿನವನ್ನು ನಿಶ್ಚಯಿಸುವ ಕುರಿತು ಗಾಂಜೀಬಾಯಿ ಯೆಡ್ತಾಡಿ ಇವರು ಹೀಗೆ ಹೇಳುತ್ತಾರೆ: 'ಹಿಂದೆ ಬೇಸಾಯ ವೃತ್ತಿ ನಮ್ಮ ಮೂಲ ಕಸುಬು ಆಗಿದ್ದುದರಿಂದ ಬಿಡುವಿಲ್ಲದ ಕೆಲಸಗಳ ನಡುವೆ ಮದುವೆಯನ್ನು ಇಟ್ಟುಕೊಳ್ಳುವುದು ಕಷ್ಟವಾಗುತ್ತಿತ್ತು. ಹಾಗಾಗಿ ಧಾರಾಕಾರವಾಗಿ ಸುರಿಯುವ ಮಳೆಗಾಲದಲ್ಲಿ ಯಾವ ಹೆಚ್ಚಿನ ಕೆಲಸಗಳೂ ಇರುವುದಿಲ್ಲ. ಇದರಿಂದಾಗಿ ಹೆಚ್ಚಿನ ಮದುವೆಗಳು ಮಳೆಗಾಲದಲ್ಲೇ ನಡೆಯುತ್ತಿದ್ದವು.'

ಹೀಗೆ ಮದುವೆ ದಿನ ನಿಶ್ಚಯವಾದ ಅನಂತರ ಸಂಬಂಧಿಕರಿಗೆ ನೆರೆಹೊರೆಯವರಿಗೆ ಮದುವೆ ಹೇಳಿಕೆಯನ್ನು ಕೊಡಲು ಹೆಣ್ಣಿನ ಕಡೆಯಿಂದ ಹುಡುಗಿಯ ತಂದೆ, ಗಂಡಿನ ಕಡೆಯಿಂದ ಹುಡುಗನ ತಂದೆ ಹೊರಡುತ್ತಿದ್ದರು. ಹಿಂದೆ ಆಮಂತ್ರಣ ಪತ್ರಿಕೆಗಳನ್ನು ಮುದ್ರಿಸುತ್ತಿರಲಿಲ್ಲ. ಎಲ್ಲರ ಮನೆಗಳಿಗೆ ಹೋಗಿ ಬಾಯ್ಮಾತಿನಲ್ಲಿ ಹೇಳಿಕೆಯನ್ನು ನೀಡಬೇಕಾಗಿತ್ತು. ಬೆನೆಗಲ್ ಸಣ್ಣ ನಾಯ್ಕರ ಅಭಿಪ್ರಾಯ ದಂತೆ, ಇವರ ಜನಸಂಖ್ಯೆ ಮತ್ತು ಸಂಬಂಧಿಕರು ಕಡಿಮೆ ಪ್ರಮಾಣದಲ್ಲಿದ್ದುದರಿಂದ ಇದೊಂದು ಕಷ್ಟಕರವಾದ ಕೆಲಸವಾಗಿರಲಿಲ್ಲ. ಆದರೆ ಇಂದು ವೈವಿಧ್ಯಮಯವಾದ ಆಮಂತ್ರಣ ಪತ್ರಿಕೆಗಳು ಬಂದಿವೆ. ಆಧುನಿಕತೆಯ ಎಲ್ಲ ಸವಲತ್ತುಗಳನ್ನು ಅವರು ಉಪಯೋಗಿಸಿಕೊಳ್ಳುತ್ತಿರುವುದು ಕಂಡುಬರುತ್ತದೆ. ನಡೆದುಕೊಂಡು ಹೋಗಿ ಹೇಳಿಕೆ ಕೊಡುವ ಕ್ರಮ ಬದಲಾಗಿ ವಾಹನಗಳು, ಮೊಬೈಲ್ ಫೋನ್‌ಗಳ ಮೂಲಕ ಈ ಕೆಲಸವನ್ನು ಕ್ಷಣಮಾತ್ರದಲ್ಲಿ ನಿರ್ವಹಿಸುತ್ತಾರೆ.

ಹಾಗಾಗಿ, ಮದುವೆಗೆ ಆಮಂತ್ರಿಸಲು ಬಂದವನಿಗೆ ಹಿಂದೆ ನೀಡುತ್ತಿದ್ದ ಆದರಾತಿಥ್ಯಗಳು ಇಂದು ಕಣ್ಮರೆಯಾಗಿವೆ. ಹಿಂದೆ ನಡೆದುಕೊಂಡು ಬರಬೇಕಾದುದರಿಂದ ಕೈಕಾಲು ತೊಳೆಯಲು ನೀರನ್ನು ಕೊಟ್ಟು ಉಪಚರಿಸಿ, ಊಟದ ಸಮಯವಾಗಿದ್ದರೆ ಊಟವನ್ನು ನೀಡಿ ಕಳುಹಿಸುತ್ತಿದ್ದರು.

ಅಧ್ಯಯನದ ದೃಷ್ಟಿಯಿಂದ ಕುಡುಬಿಯವರ ಮದುವೆಸಂಬಂಧಿ ಆಚರಣೆ ಮತ್ತು ಹಾಡುಗಳನ್ನು ಮೂರು ವಿಭಾಗಗಳಾಗಿ ವಿಂಗಡಿಸಿ ನಿರೂಪಿಸಲಾಗಿದೆ:

೧. ಮದುವೆಯ ಹಿಂದಿನ ದಿನದ ಆಚರಣೆ ಮತ್ತು ಮದುವೆ ಹಾಡುಗಳು.

೨. ಮದುವೆ ದಿನದ ಆಚರಣೆಗಳು ಮತ್ತು ಮದುವೆ ಹಾಡುಗಳು.

೩. ಮದುವೆಯ ಅನಂತರದ ಆಚರಣೆಗಳು ಮತ್ತು ಹಾಡುಗಳು.

## ೧. ಮದುವೆಯ ಹಿಂದಿನ ದಿನದ ಆಚರಣೆ ಮತ್ತು ಮದುವೆ ಹಾಡುಗಳು:

ಕುಡುಬಿಯರಲ್ಲಿ ಮದುವೆಗಳು ಗಂಡಿನ ಮನೆಯಲ್ಲಿಯೇ ನಡೆಯುತ್ತಿದ್ದವು. ಹೀಗಾಗಿ ಹೆಣ್ಣಿನ ಮನೆಯಲ್ಲಿ ಆಚರಿಸುವ ವಿಧಿವಿಧಾನಗಳಿಗಿಂತ ಕೆಲವೊಂದು ಭಿನ್ನ ಮದುವೆ ಸಂಬಂಧಿ ವಿಧಿಗಳನ್ನು ಗಂಡಿನ ಮನೆಯಲ್ಲಿ ಆಚರಿಸುವುದನ್ನು ಕಾಣಬಹುದು. ಇವುಗಳೆರಡನ್ನೂ ಒಟ್ಟುಸೇರಿಸಿ ಭಿನ್ನತೆಯನ್ನು ಗುರುತಿಸಿ, ಕ್ಷೇತ್ರಕಾರ್ಯಗಳಿಂದ ದೊರೆತ ಮಾಹಿತಿಗಳಿಂದ ಹಾಗೂ ಮುದ್ರಿತ ಪತ್ರಗಳಿಂದ ದೊರೆತ ಮಾಹಿತಿಗಳ ಆಧಾರದಿಂದ ಈ ಕೆಳಗಿನಂತೆ ವಿವರಿಸಬಹುದು:

**(೧) ಅಣ್ಣ/ತಮ್ಮ ತನ್ನ ಅಕ್ಕ/ತಂಗಿಯನ್ನು ಮದುವೆಗೆ ಆಮಂತ್ರಿಸುವ ಹಾಡು:** ಮದುವೆಯ ಹಿಂದಿನ ದಿನ ಮದುವೆಯ ಗಂಡು ತನ್ನ ತಂಗಿ ಅಥವಾ ಅಕ್ಕನ ಮನೆಗೆ ಹೋಗಿ ಆಕೆಗೆ ಉಡುಗೊರೆಯನ್ನು ಕೊಟ್ಟು ಮದುವೆಗೆ ಹೇಳಿಕೆಯನ್ನು ನೀಡಿ ಕರೆದುಕೊಂಡು ಬರುವ ಕ್ರಮ ಕುಡುಬಿಯರಲ್ಲಿದೆ. ಈ ಸಂದರ್ಭದಲ್ಲಿ ಹಿಂದೆ ಹಾಡುಗಳ ಮೂಲಕ ಆಕೆ ತನ್ನ ಬಡತನವನ್ನು ತಮ್ಮ ಅಥವಾ ಅಣ್ಣನೊಡನೆ ತೋಡಿಕೊಳ್ಳುವುದು ಮತ್ತು ಅಣ್ಣ ಅಥವಾ ತಮ್ಮ ಆಕೆಯ ಸಮಸ್ಯೆಗಳನ್ನು ಪರಿಹರಿಸುವುದು ಹಾಡುಗಳ ಮೂಲಕ ವ್ಯಕ್ತಗೊಂಡಿದೆ.

ಹಾಡು : ಕೊಂಕಣಿಮೂಲ–ಹಾಡಿದವರು : ಸಣ್ಣ ನಾಯ್ಕ ಮತ್ತು ಜಲಜಾಬಾಯಿ, ಬೆಸಿಗಲ್

ಯೋಗೋ ಬೈಣೂಲಾ ಯೋಗೋ ಬೈಣೂಲಾ ಮಿಗೆಲೇ ಮಟಕೂ ॥ ೨ ॥
ಕನ್ನಕು ಬೆಂಡೋಲೆ ನೈರೇ ಬಾವಾ ಕಸನು ಏಚ್ಚಾ
ಕನ್ನಕು ಬೆಂಡೋಲೆ ದಿತ್ತಾಗೊ ಬೈಣೂಲಾ ಯೋಗೋ ಮಿಗೆಲೇ ಮಟಕೂ
ಯೋಗೋ ಬೈಣೂಲಾ ಯೋಗೋ ಬೈಣೂಲಾ ಮುಜೇವ ಮಟಕೂ

ಕನ್ನಕು ಮುಗುಡು ನೈರೇ ಬಾವಾ ಕಸನು ಏಚ್ಚಾ

ಕನ್ನಕು ಮುಗುಡು ದಿತ್ತಗೊ ಬೈಣೂಲಾ ಯೋಗೋ ಮುಜೇವ ಮಟಕೂ

ಯೋಗೋ ಬೈಣೂಲಾ ಯೋಗೋ ಬೈಣೂಲಾ ಮುಜೇವ ಮಟಕೂ

ಕನ್ನಕು ಕರ್ಬುಲಾ ನೈರೇ ಬಾವಾ ಕಸನು ಏಚ್ಚಾ

ಕನ್ನಕು ಕರ್ಬುಲಾ ದಿತ್ತಗೋ ಬೈಣೂಲಾ ಯೋಗೋ ಮುಜೇವ ಮಟಕೂ

ಯೋಗೋ ಬೈಣೂಲಾ ಯೋಗೋ ಬೈಣೂಲಾ ಮುಜೇವ ಮಟಕೂ

ಪಯಕು ಮುದ್ದಿಯಾ ನೈರೇ ಬಾವಾ ಕಸನು ಏಚ್ಚಾ

ಪಯಕು ಮುದ್ದಿಯಾ ದಿತ್ತಗೋ ಬೈಣೂಲಾ ಯೋಗೋ ಮುಜೇವ ಮಟಕೂ

ಯೋಗೋ ಬೈಣೂಲಾ ಯೋಗೋ ಬೈಣೂಲಾ ಮುಜೇವ ಮಟಕೂ

ಗಳೆಕು ಬಂಗಾರ್ ನೈರೆ ಬಾವಾ ಕಸನು ಏಚ್ಚಾ

ಗಳೆಕು ಬಂಗಾರು ದಿತ್ತಗೋ ಬೈಣೂಲಾ ಯೋಗೋ ಮುಜೇವ ಮಟಕೂ

ಯೋಗೋ ಬೈಣೂಲಾ ಯೋಗೋ ಬೈಣೂಲಾ ಮುಜೇವ ಮಟಕೂ

ನೆಸಕು ಕಾಪ್ಪಾಡು ನೈರೆ ಬಾವಾ ಕಸನು ಏಚ್ಚಾ

ನೆಸಕು ಕಪ್ಪಾಡು ದಿತ್ತಗೋ ಬೈಣೂಲಾ ಯೋಗೋ ಮುಜೇವ ಮಟಕೂ

ಯೋಗೋ ಬೈಣೂಲಾ ಯೋಗೋ ಬೈಣೂಲಾ ಮುಜೇವ ಮಟಕೂ

**ಕನ್ನಡ ಅನುವಾದ :**

ಬಾರೆ ತಂಗಿ ಬಾರೆ ತಂಗಿ ನನ್ನ ಮದುವೆ ಮಂಟಪಕೆ ॥ ೨ ॥

ಕಿವಿಗೆ ಆಭರಣ ಇಲ್ಲ ಅಣ್ಣ ಹೇಗೆ ಬರುವುದು

ಕಿವಿಗೆ ಆಭರಣ ಕೊಡುತ್ತೇನೆ ತಂಗಿ ಬಾರೇ ನನ್ನ ಮದುವೆ ಮಂಟಪಕೆ

ಬಾರೆ ತಂಗಿ ಬಾರೆ ತಂಗಿ ನನ್ನ ಮದುವೆ ಮಂಟಪಕೆ

ಕಿವಿಗೆ ಮುಗುಡು ಇಲ್ಲ ಅಣ್ಣ ಹೇಗೆ ಬರಲಿ

ಕಿವಿಗೆ ಮುಗುಡು ಕೊಡುತೇನೆ ತಂಗಿ ಬಾರೇ ನನ್ನ ಮದುವೆ ಮಂಟಪಕೆ

ಬಾರೆ ತಂಗಿ ಬಾರೆ ತಂಗಿ ನನ್ನ ಮದುವೆ ಮಂಟಪಕೆ

ಕಿವಿಗೆ ಕರ್ಬುಲಾ ಇಲ್ಲ ಅಣ್ಣ ಹೇಗೆ ಬರಲಿ

ಕಿವಿಗೆ ಕರ್ಬುಲಾ ಕೊಡ್ತೇನೆ ತಂಗಿ ಬಾರೇ ನನ್ನ ಮದುವೆಗೆ

ಬಾರೆ ತಂಗಿ ಬಾರೆ ತಂಗಿ ನನ್ನ ಮದುವೆ ಮಂಟಪಕೆ

ಕಾಲಿಗೆ ಕಾಲುಂಗುರ ಇಲ್ಲ ಅಣ್ಣ ಹೇಗೆ ಬರಲಿ

ಕಾಲಿಗೆ ಕಾಲುಂಗುರ ಕೊಡುತೇನೆ ತಂಗಿ ಬಾರೇ ನನ್ನ ಮದುವೆ ಮಂಟಪಕೆ

ಬಾರೆ ತಂಗಿ ಬಾರೆ ತಂಗಿ ನನ್ನ ಮದುವೆ ಮಂಟಪಕೆ

ಕುತ್ತಿಗೆಗೆ ಆಭರಣ ಇಲ್ಲ ಅಣ್ಣ ಹೇಗೆ ಬರಲಿ

ಕುತ್ತಿಗೆಗೆ ಆಭರಣ ಕೊಡುತೇನೆ ತಂಗಿ ಬಾರೇ ನನ್ನ ಮದುವೆಗೆ

ಬಾರೆ ತಂಗಿ ಬಾರೆ ತಂಗಿ ನನ್ನ ಮದುವೆ ಮಂಟಪಕೆ

ಉಡಲಿಕ್ಕೆ ಸೀರೆ ಇಲ್ಲ ಅಣ್ಣ ಹೇಗೆ ಬರಲಿ

ಉಡಲಿಕ್ಕೆ ಸೀರೆ ಕೊಡುತೇನೆ ತಂಗಿ ಬಾರೆ ನನ್ನ ಮದುವೆಗೆ

ಬಾರೆ ತಂಗಿ ಬಾರೆ ತಂಗಿ ನನ್ನ ಮದುವೆ ಮಂಟಪಕೆ.

ಈ ಹಾಡಿನಲ್ಲಿ ಆಕೆಗಿರುವ ಬಡತನದ ಚಿತ್ರಣದ ಜೊತೆಗೆ ಅವಳ ಹತ್ತಿರ ಮುತ್ತೈದೆ ಧರಿಸುವ ಯಾವುದೇ ಆಭರಣಗಳು ಇಲ್ಲದಿರುವುದು ಮತ್ತು ಇದನ್ನು ಧರಿಸದೆ ತಾನು ತನ್ನ ತಮ್ಮ ಅಥವಾ ಅಣ್ಣನ ಮದುವೆಯಲ್ಲಿ ಪಾಲ್ಗೊಂಡರೆ ಅವನ ಮರ್ಯಾದೆಗೆ ಕುಂದುಂಟಾಗಬಹುದು ಎನ್ನುವ ಅಳುಕು ಅವಳಲ್ಲಿ ವ್ಯಕ್ತವಾಗುವುದನ್ನು ಕಾಣಬಹುದು. ಕುಡುಬಿ ಹೆಂಗಸು ಧರಿಸುವ ಆಭರಣಗಳಾದ ಬೆಂಡೋಲೆ, ಮುಗುಡು, ಕರ್ಬುಲಾ ಕಾಲಿನ ಉಂಗುರ, ಕುತ್ತಿಗೆಯ ಚಿನ್ನದ ಸಿವರ ಮುಂತಾದ ಉಲ್ಲೇಖಗಳು ಇಲ್ಲಿ ಬಂದಿವೆ. ಈ ಹಾಡಿನಲ್ಲಿ ವ್ಯಕ್ತವಾಗುವ ಇನ್ನೊಂದು ಬಹಳ ಮುಖ್ಯವಾದ ಅಂಶವೆಂದರೆ, ಕುಡುಬಿಯರಲ್ಲಿ ಮದುವೆಯ ಸಂದರ್ಭದಲ್ಲಿ ಅಕ್ಕ ಅಥವಾ ತಂಗಿಯ ಪಾತ್ರ ಹಿರಿದು. ಮದುವೆಯಾಗಿ ತಾಯಿಮನೆಯಿಂದ ಹೊರಟ ಹೆಣ್ಣಿಗೆ ತಾಯಿಮನೆಯ ಯಾವುದೇ ಅಧಿಕಾರ ಇರುವುದಿಲ್ಲ. ಆದರೆ, ತಮ್ಮನ ಅಥವಾ ಅಣ್ಣನ ಮದುವೆಯ ದಿನ ಆಕೆ ಮತ್ತೆ ಆ ಅಧಿಕಾರವನ್ನು ಮರಳಿ ಪಡೆಯುವ ಒಂದು ಪ್ರಯತ್ನವನ್ನು ಮಾಡುವುದು ಕಂಡುಬರುತ್ತದೆ. ಅಲ್ಲದೆ, ಅಣ್ಣ/ತಮ್ಮ ಮತ್ತು ಅಕ್ಕ/ತಂಗಿ ಇವರ ಸಂಬಂಧವನ್ನು ಸೂಚಿಸುವ ಹಾಡು:

ಹಾಡಿದವರು : ಸಾಂತೂಬಾಯಿ

ಸಮುದ್ರ ಮಧ್ಯಾಕ್ ಮಡ್ಡೆರೂಕು

ತೇ ಮಡ್ಯ ರುಕಾಕ್ ಪೂಯಿ ಆಯಿಲ್ಲಿ

ತೆಂತುಕ್ ಬಾವ್ ಅನಿ ಬಯಿನ್ ಏಕ್

ಚ್ಯಂಚಲರಿ ಬಸನ್ನು ಎಲ್ಲಲಿ

ಈ ಹಾಡಿನಲ್ಲಿ ಅಣ್ಣ/ತಮ್ಮ ತನ್ನ ಅಕ್ಕ/ತಂಗಿ ಇವರನ್ನು ಮದುವೆಗೆ ಕರೆಯುವ ಸಂದರ್ಭದಲ್ಲಿ ಆಕೆ ನಾನಾ ಕಾರಣಗಳನ್ನು ಹೇಳಿ ನಿರಾಕರಿಸಿದರೂ ಅಣ್ಣ/ತಮ್ಮ ಆಕೆಯ ಎಲ್ಲ ಸಮಸ್ಯೆಗಳನ್ನು ಪರಿಹರಿಸಿ ಆಕೆಯನ್ನು ಮದುವೆಗೆ ಕರೆತರುತ್ತಾನೆ. ಇಲ್ಲಿ ಇವರಿಬ್ಬರ ನಡುವಿನ ಸಂಬಂಧದ ಗಟ್ಟಿತನ ವ್ಯಕ್ತವಾಗಿದೆ. ಇದನ್ನು ಈ ಹಾಡಿನಲ್ಲಿ ಹೀಗೆ ವಿವರಿಸಲಾಗಿದೆ: ಇವರಿಬ್ಬರೂ ಒಂದೇ ತಾಯಿಯ ಮಕ್ಕಳಾಗಿರುವುದರಿಂದ ಆ ಭಾವನಾತ್ಮಕ ಸಂಬಂಧಗಳು ಇರುವುದನ್ನು ಗಮನಿಸಬಹುದು. ಸಮುದ್ರ ಮಧ್ಯದಲ್ಲಿ ಹುಟ್ಟಿದ ತೆಂಗಿನ ಮರದಲ್ಲಿ ಆದ ಹೂವಿನಿಂದ ಈ ಅಣ್ಣ/ತಮ್ಮ ಅಕ್ಕ/ತಂಗಿ ಹುಟ್ಟಿ ಒಂದು ತೊಟ್ಟಿಲಲ್ಲಿ ಕುಳಿತುಕೊಂಡು ಬಂದರು ಎನ್ನುವ ಹಾಡಿನ ಸಾರಾಂಶದಲ್ಲಿ ಒಂದೇ ತಾಯಿಯ ಮಕ್ಕಳು ಮತ್ತು ಅವರಲ್ಲಿ ಇರುವ ಆ ಅನ್ಯೋನ್ಯತೆಯನ್ನು ಸೂಚಿಸುತ್ತದೆ.

ಇದನ್ನು ಅಧ್ಯಯನ ಮುಂದುವರಿದಂತೆ ಬಾಗಿಲು ತಡೆಯುವ ಶಾಸ್ತ್ರದಲ್ಲಿ ಹೇಳಲಾಗಿದೆ. [ಇಲ್ಲಿ ಕೇವಲ ಮಾದರಿಗಾಗಿ ಕೊಂಕಣಿ ಹಾಡಿನ ಅನುವಾದವನ್ನು ನೀಡಲಾಗಿದೆ. ಇನ್ನು ಮುಂದೆ ಕೊಂಕಣಿ ಹಾಡನ್ನು ಕೊಡುವ ಸಂದರ್ಭದಲ್ಲಿ ಕನ್ನಡ ಅನುವಾದವನ್ನು ಕೊಡದೆ ಭಾವಾರ್ಥವನ್ನು ಮಾತ್ರ ನೀಡಲಾಗುತ್ತದೆ.]

### (೨) ನಾಂದೀಶಾಸ್ತ್ರ:

ಕುಡುಬಿಯರಲ್ಲಿ ಮದುವೆ ನಿಶ್ಚಯವಾದ ಅನಂತರ ಮದುವೆದಿನವನ್ನು ಗೊತ್ತುಮಾಡಿದ ಬಳಿಕೆ ನಡೆಯುವ ಮೊದಲ ವಿಧಿಯೇ ನಾಂದೀಶಾಸ್ತ್ರ. ಇದರ ಮುಖ್ಯ ಉದ್ದೇಶ ಮದುವೆಯ ಸಂದರ್ಭದಲ್ಲಿ ಯಾವುದೇ ಕಾರಣಕ್ಕೂ ತೊಂದರೆಗಳು ಉಂಟಾಗಬಾರದು ಎಂದು. ಕುಟುಂಬದ ಒಳಗಡೆ ಹೆರಿಗೆಗಳು, ಸಾವುಗಳು ಸಂಭವಿಸಿದಾಗ ಮದುವೆ ನಿಂತುಹೋಗುವ ಪ್ರಮೇಯ ಬರುತ್ತದೆ. ಹೀಗಾಗಿ ನಾಂದೀಶಾಸ್ತ್ರವನ್ನು ಮಾಡಿ ನಿರ್ವಿಘ್ನವಾಗಿ ನೆರವೇರುವಂತೆ ಪ್ರಾರ್ಥಿಸುತ್ತಾರೆ.

ನಾಂದೀಶಾಸ್ತ್ರ ಗಂಡು ಮತ್ತು ಹೆಣ್ಣಿನ ಮನೆಗಳಲ್ಲಿ ಮಾಡುತ್ತಾರೆ. ದೀಪವನ್ನು ಹಚ್ಚಿ ಬಾಳೆಯೆಲೆಯಲ್ಲಿ ಅಕ್ಕಿ, ತೆಂಗಿನಕಾಯಿ, ವೀಳ್ಯದೆಲೆ, ಅಡಕೆಯನ್ನಿಟ್ಟು ಇವನ್ನು ಒಂದು ಮಣೆಯ

ಮೇಲಿಟ್ಟು ದೇವರಿಗೆ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ. ಇಂದು ವೈದಿಕರ ಮನೆಗಳಿಗೆ ಹೋಗಿ ಈ ಶಾಸ್ತ್ರವನ್ನು ಮಾಡಿಕೊಂಡು ಬರುವುದನ್ನು ಕಾಣಬಹುದು.

(೩) ಚಪ್ಪರ ಶಾಸ್ತ್ರ:

ಕುಡುಬಿಯರು ಕಾಡುಪ್ರದೇಶದಲ್ಲಿ ವಾಸ ಮಾಡುತ್ತಿದ್ದುದರಿಂದ ಗುಂಪಾಗಿ ವಾಸ ಮಾಡುತ್ತಿದ್ದು, ಮನೆಗಳ ಮಧ್ಯದಲ್ಲಿ ದೊಡ್ಡದಾದ ಅಂಗಳವನ್ನು ಹೊಂದಿರುತ್ತಿದ್ದರು. ಈ ಅಂಗಳದಲ್ಲಿ ತೆಂಗಿನ ಗರಿಗಳಿಂದ ಹೆಣೆದ ತಡಿಕೆ ಮತ್ತು ಬಿದಿರನ್ನು ಉಪಯೋಗಿಸಿ ಸುಂದರವಾಗಿ ಚಪ್ಪರವನ್ನು ಹಾಕಿ ತೋರಣವನ್ನು ಕಟ್ಟುವ ವಿಶೇಷ ಅಧಿಕಾರ ಮತ್ತು ಗೌರವ ಅವರ ಊರಿನ ಜಾತಿಬಾಂಧವರಿಗೆ ಸಲ್ಲುತ್ತಿತ್ತು. ಮದುವೆಗೆ ಎರಡು-ಮೂರು ದಿನ ಮುಂಚಿತವಾಗಿ ಚಪ್ಪರವನ್ನು ಹಾಕಲಾಗುತ್ತದೆ. ಆದರೆ ತೋರಣವನ್ನು ಮಾತ್ರ ಮದುವೆಯ ಹಿಂದಿನ ದಿನ ಸಾಯಂಕಾಲವೇ ಕಟ್ಟುತ್ತಾರೆ. ತೋರಣ ಕಟ್ಟಲೆಂದೇ ಊರಿನ ಜಾತಿಬಾಂಧವರು ಒಟ್ಟಾಗಿ ಅಂಗಳಕ್ಕೆ ಬಂದಾಗ ಕೈಕಾಲು ತೊಳೆಯಲು ನೀರನ್ನು ನೀಡಿ ಮನೆಯ ಒಳಗೆ ಅವರನ್ನು ಸ್ವಾಗತಿಸಿ ಕುಡಿಯಲು ನೀರು ನೀಡಿ ಗೌರವಿಸಬೇಕು. ಅವರು ಮದುವೆ ಮನೆಗೆ ಬರುವಾಗ ಮದುವೆಮನೆಗೆಂದೇ ವಿಶೇಷವಾಗಿ ತೆಂಗಿನ ಕಾಯಿ, ಅಕ್ಕಿ, ತರಕಾರಿಗಳನ್ನು ತೆಗೆದುಕೊಂಡು ಬರುತ್ತಾರೆ. ನೀರನ್ನು ಕುಡಿದು ವೀಳ್ಯವನ್ನು ತಿಂದು ತೋರಣ ಕಟ್ಟುವ ಕಾರ್ಯದಲ್ಲಿ ತೊಡಗುತ್ತಾರೆ. ಚಪ್ಪರಕ್ಕೆ ತೋರಣ ಕಟ್ಟಿದ ಅನಂತರ ಅವರನ್ನೆಲ್ಲ ಸಾಲಾಗಿ ನಿಲ್ಲಿಸಿ ವೀಳ್ಯವನ್ನು ಕೊಡುವ ಮೂಲಕ ಗೌರವವನ್ನು ನೀಡಲಾಗುತ್ತದೆ. ಇಲ್ಲಿ ಯಾರಿಗಾದರೂ ವೀಳ್ಯವನ್ನು ನೀಡಿದಾಗ ತಪ್ಪಿದ್ದಲ್ಲಿ ಜಗಳಗಳು ಆಗುತ್ತಿದ್ದವು. ಹೀಗಾಗಿ ಬಹಳ ಜಾಗರೂಕತೆಯಿಂದ ಅವರನ್ನು ಗೌರವಿಸುತ್ತಿದ್ದರು ಎನ್ನುತ್ತಾರೆ ಬೆಸೆಗಲ್‌ನ ಸಣ್ಣ ನಾಯ್ಕರು.

ಹಾಡಿದವರು : ರುಕ್ಮಿಣೀ ನಾಯ್ಕ ಕುಸುವಿನ್‌ತೋಟ

ಯಾಹ ಲಗ್ನಾಚಾ ಮಾಟೊವಾಂತ್
ಪಾಂಸ್ ಕಾಣಾಲ್ಯೆ ದೀಯಾ
ವಾಡಿಸಕಲೇ ದಳಾತ್ ನಂದನ ಜೋತೆ
ಯಾಹ ಮಂದರತೆ ಮಹಾದೇವಿ ತುಂಜವೋಲ್ ರಕ್ಯಾಣ್
ಯಾಹ ಪೆರ್ಡೂರಾಲ್ಲೆ ಅನಂತಪದ್ಮನಾಭ ತುಂಜವೋಲ್ ರಕ್ಯಾಣ್
ಯಾಹ ಧರ್ಮಸ್ಥಳ ಮಂಜುನಾಥ ಸ್ವಾಮಿ ತುಂಜವೋಲ್ ರಕ್ಯಾಣ್
ಯಾಹ ಸುಬ್ರಹ್ಮಣ್ಯಸ್ವಾಮೀ ತುಂಜವೋಲ್ ರಕ್ಯಾಣ್
ಯಾಹ ಸರೋವಯ್ಯ ದೇವಾಂತು ತುಂಜವೋಲ್ ರಕ್ಯಾಣ್ ।

ಲಗ್ನದ ಚಪ್ಪರದಲ್ಲಿ ಐದು ದೀಪಗಳನ್ನು ಉರಿಸಿ ಇಡುತ್ತಾರೆ. ಆ ದೀಪಗಳನ್ನು ಉರಿಸಿದ ಅನಂತರ ಅಲ್ಲಿ ನೆರೆದಿರುವ ನೆಂಟರೆಲ್ಲ ಸೇರಿಕೊಂಡು ದೀಪದ ಸುತ್ತ ನಿಂತು ತಮ್ಮ ಎಲ್ಲ ಆರಾಧ್ಯ ದೇವರುಗಳನ್ನು ಈ ಸಂದರ್ಭದಲ್ಲಿ ನೆನೆಸಿಕೊಳ್ಳುತ್ತಾರೆ. ನೀವೆಲ್ಲ ವಧೂವರರನ್ನು ರಕ್ಷಿಸಬೇಕು ಎನ್ನುತ್ತಾರೆ.

ಹಾಡಿದವರು : ಸಣ್ಣ ನಾಯ್ಕ, ಬೆನೆಗಲ್

ಯಾ ಕಾರ್ಯ ವರ್ಲಾಲೆ ದೇವಾನಿ ಬೀಯಾಸ್

ದೋನಿ ಕಾರ್ಯ ವರ್ಲಾಲೆ ದೇವಾನಿ ತಂದುಳ್

ಯಾ ಕಾರ್ಯಾಚೆ ವರ್ಲಾಲೆ ದೇವಾಕು ಕಾರ್ಯ ಗಂಡೀಯಾ

ಯಾ ಕಶೆಯ ಬಂದಲ್ಲೆ ಅಂಗಳು ಬಿಸಿಲೋ ಅಂಗಣ

ಯಾ ಕಾರ್ಯ ವರ್ಲಾಲೆ ದೇವಾನಿ ಬೀಯಾಸ್

ದೋನಿ ಕಾರ್ಯ ವರ್ಲಾಲೆ ದೇವಾನಿ ತಂದುಳು

ತೋರಣ ಕಟ್ಟುವ ದಿನ ಮೇಲೆ ತಿಳಿಸಿದ ಐದು ದೀಪಗಳ ಜತೆಗೆ ಸಣ್ಣ ಐದು ಮಡಕೆಗಳನ್ನು ತೆಗೆದಿರಿಸುತ್ತಾರೆ. ಆ ಮಡಕೆಗಳಿಗೆ ಸುಣ್ಣದ ಬೊಟ್ಟುಗಳನ್ನಿಟ್ಟು ಅದರಲ್ಲಿ ವೀಳ್ಯ, ಅಡಕೆ ಮತ್ತು ಹಣವನ್ನು ಇಟ್ಟು ಚಪ್ಪರದ ಹೊರಗೆ ಇಡುತ್ತಾರೆ. ಯಾವುದೇ ಶುಭಕಾರ್ಯವನ್ನು ಮಾಡುವಾಗ ದೇವರ ಹೆಸರಿನಲ್ಲಿ ತೆಂಗಿನಕಾಯಿಯನ್ನೋ ಅಕ್ಕಿಯನ್ನೋ ಹಣವನ್ನೋ ತೆಗೆದಿರಿಸುವ ಕ್ರಮವಿದೆ. ಕುಡುಬಿಯರಲ್ಲಿ ಈ ಕ್ರಮ ಚಪ್ಪರದ ದಿನ ನಡೆಯುತ್ತದೆ. ಈ ಮೇಲಿನ ಹಾಡಿನ ಸಾರಾಂಶದ ಪ್ರಕಾರ ದೇವರ ಹೆಸರಿನಲ್ಲಿ ಮೊದಲನೆಯದಾಗಿ ಭತ್ತವನ್ನು ಅನಂತರ ಅಕ್ಕಿಯನ್ನು ಮಣ್ಣಿನ ಮಡಕೆಗಳನ್ನು ತೆಗೆದಿಟ್ಟು ತೋರಣ ಕಟ್ಟಿದ ಅಂಗಳದಲ್ಲಿ ಕುಳಿತುಕೊಳ್ಳುವುದು ಎಂದಿದೆ. ಇಲ್ಲಿ ತೋರಣ ಕಟ್ಟಿದ ಅಂಗಳದಲ್ಲಿ ಕುಳಿತುಕೊಳ್ಳುವ ಮೊದಲು ದೀಪವನ್ನು ಹಚ್ಚಿ ಈ ರೀತಿ ವಸ್ತುಗಳನ್ನು ತೆಗೆದಿಟ್ಟ ಅನಂತರವೇ ಕುಳಿತುಕೊಳ್ಳಬೇಕು ಎನ್ನುವ ನಂಬಿಕೆ ವ್ಯಕ್ತವಾಗಿದೆ.

**(೪) ಧಾರೆಮಂಟಪ :**

ಮದುವೆಯ ಚಪ್ಪರದಲ್ಲಿ ಧಾರೆಮಂಟಪವನ್ನು ನಿರ್ಮಿಸುವ ಕೆಲಸ ಮಡಿವಾಳನದ್ದು. ಸ್ವಚ್ಛತೆಯನ್ನು ಮತ್ತು ಪಾವಿತ್ರ್ಯವನ್ನು ಕಾಪಾಡುವುದಕ್ಕಾಗಿ ಇಲ್ಲಿ ಮಡಿವಾಳನಿಗೆ ಪ್ರಾಧಾನ್ಯವಿರುವುದನ್ನು ಗಮನಿಸಬಹುದು. ಆತ ಆ ಮಂಟಪದ ಮೇಲ್ಭಾಗದಲ್ಲಿ ಬಿಳಿಯ ವಸ್ತ್ರವನ್ನು ಕಟ್ಟಿ ಅದರ ನಡುವೆ ತೆಂಗಿನಕಾಯಿಯೊಂದನ್ನು ಮಾವಿನ ಎಲೆಯ ತೋರಣ ಸಮೇತ ಕಟ್ಟುತ್ತಾನೆ.

ಮಂಟಪದ ಸುತ್ತ ಮಾವಿನ ಎಲೆಯ ತೋರಣಗಳಿಂದ ಅಲಂಕರಿಸುತ್ತಾನೆ. ಇದು ಮದುವೆ ಚಪ್ಪರದ ಒಂದು ತುದಿಯಲ್ಲಿ, ಹೆಚ್ಚಾಗಿ ಪೂರ್ವದಿಕ್ಕಿಗೆ ಮದುಮಕ್ಕಳು ಮುಖಮಾಡಿ ಕುಳಿತುಕೊಳ್ಳುವಂತೆ ನಿರ್ಮಿಸಲಾಗುತ್ತದೆ. ಈ ಸಂಪ್ರದಾಯವನ್ನು ಗಂಡಿನ ಮನೆಯಲ್ಲಿ ಮಾತ್ರ ಮಾಡುತ್ತಾರೆ. ಯಾಕೆಂದರೆ, ಮದುವೆಗಳು ಗಂಡಿನ ಮನೆಯಲ್ಲೇ ನಡೆಯುತ್ತಿದ್ದವು. ಆದರೆ ಇಂದು ಕಲ್ಯಾಣಮಂಟಪಗಳಲ್ಲಿ ಮದುವೆಗಳು ನಡೆಯುವುದರಿಂದ ಈ ಕ್ರಮ ಪೂರ್ತಿಯಾಗಿ ಕೈಬಿಟ್ಟುಹೋಗಿದೆ. ಆದರೂ ಹಿಂದಿನಿಂದ ಹಿರಿಯರು ಮಾಡಿಕೊಂಡು ಬಂದ ಕ್ರಮ ಎಂದು ಮಡಿವಾಳನನ್ನು ಕರೆದು ಇಂದಿಗೂ ಅಕ್ಕಿ, ತೆಂಗಿನಕಾಯಿ, ಬಟ್ಟೆ ಮತ್ತು ಹಣ ಇಟ್ಟು ಆತನನ್ನು ಗೌರವಿಸಲಾಗುತ್ತದೆ.

ಈ ಮಡಿವಾಳನೇ ಬಂದು ಧಾರೆಮಂಟಪಕ್ಕೆ ಬಿಳಿವಸ್ತ್ರವನ್ನು ಹಾಕಬೇಕು ಎನ್ನುವ ವಿಧಿ ಏನಿದೆ ಅದರ ಕುರಿತು ಕೆಲವೊಂದು ಕುತೂಹಲಕಾರಿ ಅಂಶಗಳು ಹುಟ್ಟಿಕೊಳ್ಳುತ್ತವೆ. ತುಳುನಾಡಿನ ಭೂತಾರಾಧನೆಯಲ್ಲಿ ನಾವು ಕಂಡಂತೆ, ಭೂತಗಳಿಗೆ ನೇಮವನ್ನು ನೀಡುವ ಸಂದರ್ಭದಲ್ಲಿ ಮಡಿವಾಳನ ಪಾತ್ರ ಬಹಳ ಮುಖ್ಯ. ಈತನನ್ನು ತುಳುವಿನಲ್ಲಿ 'ಮಡ್ಡೆಲ' ಮತ್ತು ಭೂತಾರಾಧನೆಯ ಸಂದರ್ಭದಲ್ಲಿ 'ಮುಕ್ಕಲ್ದಿ' ಎಂದು ಕರೆಯುತ್ತಾರೆ. ಅಲ್ಲಿ ಭೂತದ ಆರಾಧನೆಗೆ ಕೃತಕವಾಗಿ ನಿರ್ಮಿಸಿದ ಗುಡಿಗೆ ಬಿಳಿಯ ವಸ್ತ್ರವನ್ನು ಕಟ್ಟಿ ತೆಂಗಿನ ಕಾಯಿಯನ್ನು ನಡುವೆ ಕಟ್ಟಲಾಗುತ್ತದೆ. ಭೂತಗಳು ಕೈಯಲ್ಲಿ ಹಿಡಿಯುವ ದೀವಟಿಗೆಗಳು ಕೂಡ ಆತ ತಂದ ವಸ್ತ್ರಗಳನ್ನೇ ಉಪಯೋಗಿಸುತ್ತಾರೆ. ಬಹುಶಃ ಕರಾವಳಿ ಕರ್ನಾಟಕಕ್ಕೆ ವಲಸೆ ಬಂದ ಕುಡುಬಿಯರ ಮೇಲೆ ಇಲ್ಲಿಯ ಜನರ ಪ್ರಭಾವ ಉಂಟಾಗಿರುವುದನ್ನು ಗುರುತಿಸಬಹುದು. ಸ್ಥಳೀಯರ ಜೊತೆಗೆ ಅವರ ಸಂಬಂಧಗಳು ಏರ್ಪಟ್ಟು ಪರಸ್ಪರ ಕೊಳುಕೊಡುಗೆಗಳು ನಡೆದಿವೆ.

(೫) ಕ್ಷೌರ :

ಮದುವೆಯ ಗಂಡಿಗೆ ವಿಶೇಷವಾಗಿ ಈ ಒಂದು ವಿಧಿಯನ್ನು ನೆರವೇರಿಸುತ್ತಾರೆ. ಕ್ಷೌರಿಕನನ್ನು ಕರೆಸಿ ಅವನಿಗೆ ಒಂದು ಹರಿವಾಣದಲ್ಲಿ ಒಂದು ಸೇರು ಅಕ್ಕಿ, ಎಲೆಅಡಿಕೆ, ತೆಂಗಿನಕಾಯಿ, ವಸ್ತ್ರ, ಹಣವನ್ನಿಟ್ಟು ಗೌರವಿಸಿದ ಅನಂತರ ಮದುಮಗನಿಗೆ ಕ್ಷೌರ ಮಾಡಲಾಗುತ್ತದೆ. ಈಗಲೂ ಈ ಪದ್ಧತಿ ಜಾರಿಯಲ್ಲಿದೆ.

(೬) ಹಳದಿಸ್ನಾನ :

ಮದುವೆಯ ಗಂಡು ಮತ್ತು ಹೆಣ್ಣಿನ ಮನೆಗಳಲ್ಲಿ ಈ ಶಾಸ್ತ್ರ ನಡೆಯುತ್ತದೆ. ಒಂದು ಶುಭಮುಹೂರ್ತವನ್ನು ನೋಡಿ ಇದನ್ನು ನಡೆಸುತ್ತಾರೆ. ಕುಡುಬಿಯರ ಮದುವೆಯಲ್ಲಿ ಹಳದಿಸ್ನಾನಕ್ಕೆ ವಿಶೇಷ ಮಾನ್ಯತೆ ಇದೆ. ಇವರಲ್ಲಿ ಧಾರೆಯನ್ನು ನಿಗದಿತ ಸಮಯದಲ್ಲಿಯೇ ನಡೆಸಬೇಕೆಂಬ

ನಿಯಮವಿಲ್ಲ. ಆದರೆ ಹಳದಿಸ್ನಾನವನ್ನು ಗಳಿಗೆ ನೋಡಿಯೇ ಮಾಡುವ ಕ್ರಮವಿದೆ. ಮದುವೆಯ ಗಂಡು ಮತ್ತು ಹೆಣ್ಣನ್ನು ಅವರವರ ಮನೆಯಲ್ಲಿ ಮಣೆಯ ಮೇಲೆ ಕುಳ್ಳಿರಿಸಿ ಒಂದು ತಟ್ಟೆಯಲ್ಲಿ ಅರಶಿನ ಇನ್ನೊಂದು ತಟ್ಟೆಯಲ್ಲಿ ತೆಂಗಿನೆಣ್ಣೆಯನ್ನು ತೆಗೆದುಕೊಂಡು ಮನೆಯ ಯಜಮಾನ ಮೊದಲಿಗೆ ಹಚ್ಚುತ್ತಾನೆ. ಈ ರೀತಿ ಹಚ್ಚುವಾಗ ಕುಡುಬಿಯರಲ್ಲಿ ಹಾಡುಗಳನ್ನು ಹಾಡುವ ಕ್ರಮವಿದೆ. ನನ್ನ ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಹಾಡನ್ನು ಇಲ್ಲಿ ನೀಡಲಾಗಿದೆ:

ಹಾಡಿದವರು : ರತ್ನಾಬಾಯಿ ಮತ್ತು ಸಣ್ಣ ನಾಯ್ಕ

ಅಂಬ್ಯಾಚೆ ಅಮೃತ ಯೋ ಒರತಲ್ಲೇ ಯಜಮಾನಿ ಅಂಬಾರ ಬಂದೀತ

ಕಶ್ಯಾಚೆ ವಟ್ಟಿ ನೊಕಡಾಚೆ ಬಾಲೀ

ಯಾ ಒರತಲ್ಲೆ ಉಜ್ಜೆ ಪಯಪಲ್ಲರಿ ತ್ಯಾಲ್ ಸಡಯಿತ

ಕಶ್ಯಚೆ ವಟ್ಟಿ ನೊಕಡಾಚೆ ಬಾಲಿ ಯೋ ವರತಾಲೆ ಯಜಮಾನಿ ದಯೆ ದ್ಯಾಂಪ್ರಾತ್ಯಾಲ್ ಸಡಯಿತ ।

ಕಶ್ಯಚೆ ವಟ್ಟಿ ನೊಕಡಾಚೆ ಬಾಲಿ ಯೋ ವರತಾಲೆ ಯಜಮಾನಿ

ಉಜೆ ಬುಜರಿ ತ್ಯಾಲ್ ಸಡಯಿತ ।

ಕಶ್ಯಚೆ ವಟ್ಟಿ ನೊಕಡಾಚೆ ಬಾಲಿ ಯೋ ವರತಾಲೆ ಯಜಮಾನಿ

ಮತ್ತೆ ತಳರಿ ತ್ಯಾಲ್ ಸಡಯಿತ ।

ಕಶ್ಯಚೆ ವಟ್ಟಿ ನೊಕಡಾಚೆ ಬಾಲಿ ಯೋ ವರತಾಲೆ ಯಜಮಾನಿ

ದಯೆ ಬುಜರಿ ತ್ಯಾಲಿ ದೆವಯಿತ ।

ಕಶ್ಯಚೆ ವಟ್ಟಿ ನೊಕಡಾಚೆ ಬಾಲಿ ಯೋ ವರತಾಲೆ ಯಜಮಾನಿ

ದಯೆ ಪಾಯ ತ್ಯಾಲ್ ದೆವಯಿತ ॥

ಇದು ಮದುವೆಯ ಗಂಡು ಮತ್ತು ಹೆಣ್ಣಿಗೆ ಅವರವರ ಮನೆಯಲ್ಲಿ ಎಣ್ಣೆಮುಹೂರ್ತದ ದಿನವನ್ನು ಮತ್ತು ಗಳಿಗೆಯನ್ನು ಗೊತ್ತುಮಾಡಿ ಎಣ್ಣೆ ಹಚ್ಚುವ ಸಂದರ್ಭದಲ್ಲಿ ಹಾಡುವ ಹಾಡು. ಕುಡುಬಿಯರಲ್ಲಿ ಮದುವೆಯ ಗಂಡು ಅಥವಾ ಹೆಣ್ಣಿಗೆ ಅಪ್ಪ ಇಲ್ಲದಿದ್ದರೆ ಧಾರೆಯೆರೆಯುವ ಹಕ್ಕು ಕುಟುಂಬದ ಹಿರಿಯರಿಗೆ ಸಲ್ಲುತ್ತದೆ. ಅವರು ಒಂದು ವೇಳೆ ಬೇರೆಯವರು ಧಾರೆಯೆರೆಯಲಿ ಎಂದು ಅನುಮತಿ ನೀಡಿದ್ದಲ್ಲಿ ಮದುವೆಯ ಗಂಡು ಅಥವಾ ಹೆಣ್ಣಿನ ಅಣ್ಣಂದಿರು ಈ ಶುಭಕಾರ್ಯವನ್ನು ಮಾಡಬಹುದು. ಈತನನ್ನು ಯಜಮಾನ ಎಂದು ಕರೆಯುತ್ತಾರೆ. ಮದುವೆಚಪ್ಪರದ

ಒಂದು ತುದಿಯಲ್ಲಿ ಒಂದು ಕೋಲಿಗೆ ಹಲಸಿನ ಮತ್ತು ಮಾವಿನ ಎಲೆಗಳನ್ನು ಕಟ್ಟಿ ಅದನ್ನು ನೆಲದಲ್ಲಿ ಊರುತ್ತಾನೆ. ಅನಂತರ ಒಂದು ಕಂಚಿನ ಬಟ್ಟಲಲ್ಲಿ ಎಣ್ಣೆ ಹಾಕಿ ಅದರಲ್ಲಿ ಕಬ್ಬಿಣ ಅಥವಾ ಬೆಳ್ಳಿಯ ಚೂರಿಯನ್ನು ಇಟ್ಟು ಆದರಿಂದ ಎಣ್ಣೆಯನ್ನು ತೆಗೆದು ಮದುಮಗನಿಗೆ ಹಚ್ಚುತ್ತಾನೆ. ಆತ ಮೊದಲಿಗೆ ಬಲಕಾಲಿನ ಪಾದದಿಂದ ಎಣ್ಣೆ ಹಚ್ಚುತ್ತಾ ಬಲಕಾಲಿನ ಗಂಟು, ಬಲ ಭುಜ, ನಡು ನೆತ್ತಿಗೆ ಎಣ್ಣೆ ಹಚ್ಚಿ ಹಾಗೆ ಎಡ ಭುಜದಿಂದ ಇಳಿದು ಎಡ ಕಾಲಿನ ಗಂಟು ಮತ್ತು ಎಡ ಪಾದಕ್ಕೆ ಹಚ್ಚುತ್ತಾನೆ. ಅವರ ಮಾತಿನಲ್ಲಿ 'ತೇಲ್ ಸಡಯಿತ' (ಎಣ್ಣೆ ಏರಿಸುವುದು) ಮತ್ತು 'ತೇಲ್ ದೆವಯಿತ' (ಎಣ್ಣೆ ಇಳಿಸುವುದು) ಎನ್ನುತ್ತಾರೆ.

ಈ ಶಾಸ್ತ್ರ ಮುಗಿದ ಅನಂತರ ಆತನನ್ನು ಅಥವಾ ಆಕೆಯನ್ನು ಕಲಶಸ್ನಾನ ಮಾಡಿಸುವ ಪದ್ಧತಿ ಇದೆ. ಹಿಂದೆ ತೆಂಗಿನ ಹಾಲನ್ನು ಮೈಗೆ ಹಚ್ಚಿ ಸ್ನಾನ ಮಾಡಿಸುತ್ತಿದ್ದರು. ಇದನ್ನು 'ರೋಸ್' ಎಂದು ಅವರ ಭಾಷೆಯಲ್ಲಿ ಕರೆಯುತ್ತಾರೆ. ಇಲ್ಲಿ ಅಂದರೆ ಮದುವೆಯ ಹಿಂದಿನ ದಿನ ಸ್ನಾನ ಮಾಡಿದ ಹೆಣ್ಣು ಮತ್ತು ಗಂಡು ಅನಂತರ ಸ್ನಾನ ಮಾಡುವುದು ಮದುವೆಯ ವಿಧಿವಿಧಾನಗಳನ್ನು ಮುಗಿಸಿದ ಅನಂತರವೇ.

**(೭) ಒಲೆಯ ಪೂಜೆ:**

ಗಂಡಿನ ಮನೆಯಲ್ಲಿ ಮದುವೆಯ ಅಡುಗೆಗಾಗಿ ಒಲೆಗಳನ್ನು ಹಾಕುತ್ತಾರೆ. ಈ ಒಲೆಗಳನ್ನು ಗದ್ದೆಯಿಂದ ಮಣ್ಣನ್ನು ತಂದು ಅದರಲ್ಲಿರುವ ಕಲ್ಲುಗಳನ್ನು ಪ್ರತ್ಯೇಕಿಸಿ, ನೀರು ಹಾಕಿ ಮಣ್ಣನ್ನು ಹದಗೊಳಿಸಿ ಅಂಟುಬರುವಂತೆ ಮಾಡಿ ಅದರಿಂದ ಮನೆಯ ಗಂಡಸರು ಮದುವೆಗೆ ಒಂದು ವಾರ ಇರುವಾಗಲೇ ನಿಗದಿತ ಸ್ಥಳದಲ್ಲಿ ಐದರಿಂದ ಆರು ಒಲೆಗಳನ್ನು ಹಾಕುತ್ತಾರೆ. ಇವು ಒಣಗಿದ ಬಳಿಕ ಸ್ತ್ರೀಯರು ಅದನ್ನು ಸೆಗಣಿಯಿಂದ ಸಾರಿಸುತ್ತಾರೆ. ಹೀಗೆ ಮದುವೆ ಅಡುಗೆಗೆ ಹಾಕಿದ ಒಲೆಗಳನ್ನು ಮದುವೆಯ ಹಿಂದಿನ ದಿನ ಮದುವೆಗಂಡು ಪೂಜೆ ಮಾಡುವ ಕ್ರಮವಿದೆ. ಮದುವೆಯ ಗಂಡು ಒಲೆಯ ಎದುರು ನಿಂತು ತೆಂಗಿನ ಕಾಯಿಯನ್ನು ಒಡೆದು ಒಲೆಗೆ ವೀಳ್ಯದೆಲೆ ಮತ್ತು ಅಕ್ಕಿಯನ್ನು ಅರ್ಪಿಸಿ ಆರತಿ ಬೆಳಗುತ್ತಾನೆ. ಆನಂತರ ಒಂದು ಪಾತ್ರೆಯಲ್ಲಿ ನೀರನ್ನು ಇಟ್ಟು ಸಾಂಕೇತಿಕವಾಗಿ ಒಲೆಯಲ್ಲಿ ಬೆಂಕಿಯನ್ನು ಉರಿಸುತ್ತಾನೆ. ಆನಂತರವೇ ಅಲ್ಲಿ ಮದುವೆಯ ಅಡುಗೆ ತಯಾರಿ ಕೆಲಸಗಳು ನಡೆಯುತ್ತವೆ.

ಮದುವೆಗೆ ಬಂದ ಅತಿಥಿಗಳಿಗೆ ಹಾಕುವ ಊಟ ಮದುವೆಯ ಸಂದರ್ಭದಲ್ಲಿ ಬಹಳ ಪ್ರಮುಖವಾದುದು. ಮದುವೆಗಾಗಿ ತಯಾರಿಸಿದ ಊಟ ಎಲ್ಲರಿಗೂ ಸಾಕಾಗುವಂತೆ ರುಚಿಕರವಾಗಿ ಆರೋಗ್ಯಕರವಾದ ಪರಿಣಾಮವನ್ನುಂಟು ಮಾಡಬೇಕೆನ್ನುವ ಆಶಯವನ್ನು ಇಲ್ಲಿ ಕಾಣಬಹುದು. ಇಂದು ಮದುವೆಗಳು ಮನೆಗಳಲ್ಲಿ ನಡೆಯುತ್ತಿದ್ದರೂ ಚಪ್ಪರದ ದಿನ ತಯಾರಿಸುವ ಊಟ ಮತ್ತು ಮದುವೆಯ ದಿನ ರಾತ್ರಿಯ ಊಟಕ್ಕಾಗಿ ಒಲೆಗಳನ್ನು ಹಾಕಿ ಸಾಂಕೇತಿಕವಾಗಿ ಪೂಜೆಯನ್ನು ನೆರವೇರಿಸುತ್ತಾರೆ.

**(೮) ಮರದ ಪೂಜೆ:**

ಕುಡುಬಿಯರ ಮದುವೆಗಳಲ್ಲಿ ಮದುವೆ ಚಪ್ಪರದಲ್ಲಿ ನಿರ್ಮಿಸಲಾದ ಮದುವೆ ಮಂಟಪದ ಹತ್ತಿರ ನೆಲದಲ್ಲಿ ಹತ್ತಿಮರದ ಕೊಂಬೆಯೊಂದನ್ನು ನೆಟ್ಟು ಅದಕ್ಕೆ ನೀರು ಸೆಗಣಿ ಹಾಕಿ ಅನ್ನವನ್ನು ಅರ್ಪಿಸಿ ಮದುವೆ ಗಂಡು ಆರತಿ ಬೆಳಗಿಸುತ್ತಾನೆ. ಇದು ಹೆಣ್ಣು ಮತ್ತು ಗಂಡಿನ ಮನೆಗಳಲ್ಲಿ ಪ್ರತ್ಯೇಕವಾಗಿಯೇ ನಡೆಯುತ್ತಿದ್ದವು. ಇಲ್ಲಿ ಹತ್ತಿ ಮರ ದುಷ್ಟಶಕ್ತಿಗಳನ್ನು ನಾಶ ಮಾಡುವ ಸಂಕೇತವಾಗಿ ಬಳಸಲ್ಪಟ್ಟಿದೆ. ಮರದ ಬೆಳವಣಿಗೆಗೆ ಬೇಕಾದ ನೀರು ಮತ್ತು ಗೊಬ್ಬರವಾಗಿ ಸೆಗಣಿಯನ್ನು ಹಾಕಲಾಗುತ್ತದೆ. ದುಷ್ಟಶಕ್ತಿಗಳಿಗೆ ಬಲಿಯಾಗಿ ಅನ್ನವನ್ನು ಅರ್ಪಿಸುವುದನ್ನು ಕಾಣಬಹುದು.

ಮುಗೇರರ ಮದುವೆಗಳಲ್ಲಿ ಹಾಲೆ ಮರವನ್ನು ಉಪಯೋಗಿಸುವುದನ್ನು ಮುಗೇರರ ಕುರಿತು ಅಧ್ಯಯನ ಮಾಡಿದ ಡಾ। ಅಭಯ ಕುಮಾರ್ ಕೌಕ್ರಾಡಿ ಅವರು ತಮ್ಮ ಸಂಶೋಧನ ಪ್ರಬಂಧದಲ್ಲಿ ಮುಗೇರರ ಮದುವೆಗಳಲ್ಲಿ ಹಾಲೆ ಮರವನ್ನು ಸಮೃದ್ಧಿಯ ಸಂಕೇತವಾಗಿ ಬಳಸುತ್ತಾರೆ ಎಂದಿದ್ದಾರೆ.

**(೯) ನೆಂಟರ ಕೂಡುವಿಕೆ :**

ಮದುವೆಯ ಹಿಂದಿನ ದಿನವನ್ನು 'ಕೂಡುವ ದಿನ'ವೆಂದು ಹೇಳಲಾಗಿದೆ. ಕೂಡುವಿಕೆ ಎಂದರೆ ಮದುವೆಗಾಗಿ ಬಂಧುಬಾಂಧವರೆಲ್ಲಾ ಮದುವೆಯ ಮನೆಯಲ್ಲಿ ಸೇರುವುದು ಎಂದು ಅರ್ಥೈಸಲಾಗಿದೆ. ಹಿಂದಿನ ಕಾಲದಲ್ಲಿ ಈಗಿನಂತೆ ವಾಹನ ಸೌಕರ್ಯಗಳಿರಲಿಲ್ಲ. ಹಾಗಾಗಿ ಮದುವೆಗೆ ಬರುವವರೆಲ್ಲ ಕಾಲ್ನಡಿಗೆಯಿಂದಲೇ ಮದುವೆಮನೆಗೆ ಬರಬೇಕಾಗಿತ್ತು. ದೂರದ ಸಂಬಂಧಿಕರಿಗೆ ಮದುವೆಯ ದಿನದಂದು ಮುಹೂರ್ತಕ್ಕೆ ಸರಿಯಾಗಿ ಬರುವುದು ಕಷ್ಟವಾಗುತ್ತಿದ್ದುದರಿಂದ ಮದುವೆಯ ಹಿಂದಿನ ದಿನ 'ಚಪ್ಪರಶಾಸ್ತ್ರ'ದ ದಿನ ಎಲ್ಲರೂ ಬಂದು ಸೇರುತ್ತಿದ್ದರು.

ಈ ರೀತಿ ಹಿಂದಿನ ದಿನ ಹೆಣ್ಣಿನ ಮನೆಯಲ್ಲಿ ಬಂದು ಸೇರುವವರಲ್ಲಿ ಗಂಡಿನ ಕಡೆಯ ಐದು ಮಂದಿ ಗಂಡಸರು ಮತ್ತು ಊರಿನ ಪ್ರಮುಖರು ಮುಖ್ಯರಾಗಿದ್ದಾರೆ. ಮದುವೆಯ ಹಿಂದಿನ ದಿನ ಹೆಣ್ಣಿನ ಮನೆಗೆ ಗಂಡಿನ ಕಡೆಯಿಂದ ಗಂಡಿನ ತಂದೆ ಅಥವಾ ಯಜಮಾನ ಬುದ್ಯಂತ ಮತ್ತು ಮೂವರು ಗಂಡಸರು ಒಟ್ಟು ಬೆಸಸಂಖ್ಯೆಯಲ್ಲಿ ತಮ್ಮ ಊರಿನ ಪ್ರಮುಖರೊಡನೆ ಮದುಮೆಹೆಣ್ಣಿಗೆ ಐದು ಸೀರೆ, ರವಿಕೆ, ಐದು ಬಗೆಯ ಹೂಗಳು ಕಟ್‌ಕರಿಮಣಿ, ಬಳೆ, ಬಾಚಣಿಗೆ, ಕುಂಕುಮಡಬ್ಬಿಯನ್ನು ಒಂದು ಹರಿವಾಣದಲ್ಲಿ ಇಟ್ಟು ಇದನ್ನು ಮದುಗಿ ಕಡೆಯವರಿಗೆ ಕೊಡುತ್ತಾನೆ.

ಈ ಧಾರೆಸೀರೆಯನ್ನು ಕೊಡುವ ಹೊತ್ತಿನಲ್ಲಿ ಇಡುವ ಈ ಐದು ಬಗೆಯ ಹೂಗಳ ವಿವರವನ್ನು ಒಳಗೊಂಡ ಹಾಡು ಇಲ್ಲಿದೆ:

ಹಾಡಿದವರು : ಗಾಂಜೀಬಾಯಿ, ಸಾಂತೂಬಾಯಿ.

ಬಾಯಿಕಟ್ಟೆರ್ ಅಬೋಲಿ ಪೂಲ್ ಪುಲ್ಲೆ

ತೇ ಗರಾರಿ ಹಾಡುನ್ ಪೊಡ್ ಕರ್ಚೆ

ಮಗರಿ ಪೂಲ್ ಘರಾ ಹಡುನ್ ಪೋಡ್ ಕೆಲ್ಲೊ

ತೋ ಸಿಂತರಾಣಿ ಮಳ್ಳೊ

ಮಗಿರಿ ಗುಲಾಬಿ ಪೂಲ್ ಕಳಾ ಕುಂಟುನ್

ಪೊಡ್ ಕರುಣ್ ಸಿಂತರಾಣಿನಿ ಮಳ್ಳೊ

ಒವಳ ಪೂಲ್ ಹಡುನು ಪೊಡ್ ಕರುನ್

ಸಿಂತಾರಾಣಿ ಮಳ್ಳೊ

ಕ್ಯಾದಗ್ ಪೂಲ್ ಹಡುನು ಪೊಡ್ ಕರುನು

ಸಿಂತಾರಾಣಿ ಮಳ್ಳೊ.

ಈ ಐದು ಹೂಗಳು ಯಾವುದೆಂದರೆ ಕನಕಾಂಬರ, ಮಲ್ಲಿಗೆ, ಗುಲಾಜಿ, ರೆಂಜೆಹೂ, ಕೇದಗೆ. ಈ ಹೂಗಳಲ್ಲಿ ಕನಕಾಂಬರಕ್ಕೆ ಬಹಳ ಶ್ರೇಷ್ಠ ಸ್ಥಾನ.

ಬಾವಿಕಟ್ಟೆಯಲ್ಲಿ ಬೆಳೆದ ಕನಕಾಂಬರಹೂವನ್ನು ತೆಗೆದು ಮನೆಗೆ ತಂದು ಮಾಲೆ ಮಾಡಿ ಆನಂತರ ಮಲ್ಲಿಗೆ ಹೂವನ್ನು ಮನೆಗೆ ತಂದು ಮಾಲೆ ಮಾಡಿ ಅವುಗಳನ್ನು ಮುತ್ತೈದೆಯರು ಮುಡಿಯುತ್ತಾರೆ. ಗುಲಾಜಿಯ ಮೊಗ್ಗೆಗಳನ್ನು ತಂದು ಮಾಲೆ ಮಾಡಿ ಮುತ್ತೈದೆಯರು ಮುಡಿದುಕೊಳ್ಳುತ್ತಾರೆ. ರೆಂಜೆಹೂ ಮತ್ತು ಕೇದಗೆ ಹೂಗಳನ್ನು ಮನೆಗೆ ತಂದು ಅವುಗಳನ್ನು ಮಾಲೆ ಮಾಡಿ ಮುತ್ತೈದೆಯರು ಮುಡಿದುಕೊಳ್ಳುವ ಬಗ್ಗೆ ವಿವರಗಳು ಈ ಹಾಡಿನಲ್ಲಿ ದೊರೆಯುತ್ತವೆ. ಮುತ್ತೈದೆಯರು ಈ ಹೂಗಳನ್ನು ಮುಡಿಯುತ್ತಾರೆ ಎನ್ನುವ ಮೂಲಕ ಆ ಹೂಗಳಿಗೆ ಒಂದು ಪವಿತ್ರಸ್ಥಾನವನ್ನು ಕಲ್ಪಿಸಿದ್ದಾರೆ. ಮದುವೆಯಂತಹ ಶುಭಕಾರ್ಯಕ್ಕೆ ಈ ಐದು ಹೂಗಳನ್ನು ಧಾರೆಸೀರೆಯ ಮೇಲೆ ಇಟ್ಟು ಕೊಡುವಂತಹದ್ದು ಮುತ್ತೈದೆಯ ಹಿರಿಮೆಯನ್ನು ಸೂಚಿಸುತ್ತವೆ. ಅಲ್ಲದೆ, ಇಲ್ಲಿ ಉಲ್ಲೇಖಿಸಿರುವ ಐದು ಹೂಗಳಲ್ಲಿ ಕೇದಗೆ ಮತ್ತು ರೆಂಜೆಹೂಗಳು ಮಳೆಗಾಲದಲ್ಲಿ ಮಾತ್ರ ವಿಶೇಷವಾಗಿ ದೊರಕುವಂತಹವು. ಮತ್ತು ಕುಡುಬಿಯರ ಮದುವೆಗಳು ಸಾಮಾನ್ಯವಾಗಿ ಮಳೆಗಾಲದಲ್ಲೇ ನಡೆಯುವುದರಿಂದ ಈ ಹೂಗಳ ಬಳಕೆ ಅವರ ಮದುವೆ ಸಂದರ್ಭದಲ್ಲಿ ಆಗಿರುವುದನ್ನು ಗಮನಿಸಬಹುದು. ಆದರೆ ಇಂದಿನ ಮದುವೆಗಳಲ್ಲಿ ಅಂಗಡಿಗಳಲ್ಲಿ

ಮಾರಾಟಕ್ಕಿರುವ ಹೂಗಳನ್ನೇ ತಂದು ಮದುವೆ ಸಂದರ್ಭಗಳಲ್ಲಿ ಬಳಸುತ್ತಿರುವುದು ಕಂಡುಬರುತ್ತದೆ. ಆದರೆ, ಧಾರೆಸೀರೆಯ ಜೊತೆಗೆ ಈ ಐದು ಹೂಗಳನ್ನು ಇಟ್ಟು ಮದುವೆ ದಿನ ಬೆಳಗ್ಗೆ ಗಂಡಿನ ತಂದೆ ಹೆಣ್ಣಿನ ಕಡೆಯವರಿಗೆ ಕೊಡುವ ಕ್ರಮ ಇವತ್ತಿಗೂ ಇದೆ.

ಆ ದಿನ ಸಾಯಂಕಾಲ ನೆರೆದ ಎಲ್ಲ ನೆಂಟರಿಗೆ ಕಾಲು ತೊಳೆಯಲು ನೀರನ್ನು ಕೊಟ್ಟು ಊಟವನ್ನು ಹಾಕಲಾಗುತ್ತದೆ. ಊಟವಾದ ಮೇಲೆ ಗಂಡಿನ ಕಡೆಯಿಂದ ಬಂದ ಹುಡುಗನ ತಂದೆ ಅಥವಾ ಯಜಮಾನ ಬುದ್ಯಂತ ಮತ್ತು ಮೂವರು ಹೆಣ್ಣಿನ ಮನೆಯಲ್ಲಿ ಉಳಿದುಕೊಂಡು ಉಳಿದ ಊರಿನ ಪ್ರಮುಖರು ಹಿಂದಕ್ಕೆ ಹೋಗುತ್ತಾರೆ.

ಈ ಬಗ್ಗೆ ರಾಮ ನಾಯ್ಕ ಅಂಡಾರುಕಟ್ಟೆ ಅವರು ಹೀಗೆ ಅಭಿಪ್ರಾಯಪಡುತ್ತಾರೆ:

'ಧಾರೆಯೆರೆಯುವವನು ಮತ್ತು ರಾಯ್‌ಬಾಡಿ ಅಥವಾ ಬುದ್ಯಂತ ಹೆಣ್ಣಿನ ಮನೆಯಲ್ಲಿ ಉಳಿಯುತ್ತಾರೆ ಯಾಕೆಂದರೆ ಮರುದಿನ ಹೆಣ್ಣಿನ ದಿಬ್ಬಣದವರಿಗೆ ದಾರಿ ಗೊತ್ತಿಲ್ಲದಿದ್ದರೆ ದಾರಿ ತೋರಿಸಲು' ಎಂದಿದ್ದಾರೆ. ಆದರೆ ಕುಸುವಿನ್‌ತೋಟದ ಭೀಮ ನಾಯ್ಕರು ಆ ಸಂದರ್ಭಕ್ಕೆ ಹತ್ತಿರವಾದ ಅಭಿಪ್ರಾಯವನ್ನು ಕೊಟ್ಟಿರುವುದನ್ನು ದಾಖಲಿಸಲಾಗಿದೆ.

ಮದುವೆಯ ದಿನ ಬೆಳಗ್ಗೆ ಗಂಡಿನ ಕಡೆಯವರು ನೀಡಿದ ಧಾರೆ ಸೀರೆಯನ್ನು ಉಟ್ಟು ಶೃಂಗಾರ ಗೊಂಡು ಕುತ್ತಿಗೆಗೆ ಕಟ್‌ಕರಿಮಣಿಯನ್ನು ಕಟ್ಟಿ ಹೊರಟು ನಿಂತ ಹೆಣ್ಣು ತನ್ನ ತಾಯಿಮನೆಯಿಂದ ಹೊಸ್ತಿಲನ್ನು ದಾಟಿ ಹೊರಗೆ ಬರಬೇಕಾದರೆ ಕೆಲವೊಂದು ವಿಧಿಗಳನ್ನು ನೆರವೇರಿಸುತ್ತಾರೆ. ಈ ಎಲ್ಲ ವಿಧಿಗಳನ್ನು ಮಾಡುವವನು ಗಂಡಿನ ತಂದೆ. ಇವನಿಗೆ ಮಾರ್ಗದರ್ಶನ ನೀಡುವವನು ರಾಯಬಾಡಿ. ಹೀಗಾಗಿ ಇವರಿಬ್ಬರೂ ರಾತ್ರಿ ಅಲ್ಲಿ ಇರಲೇ ಬೇಕು. ಅಲ್ಲದೆ, ರಾತ್ರಿ ಹಿಂದಕ್ಕೆ ಹೋಗಿ ಬೆಳಗ್ಗೆ ಮತ್ತೆ ಬರುವುದು ತುಂಬ ಕಷ್ಟದ ಕೆಲಸವಾಗಿತ್ತು ಎಂದು ಹೇಳುತ್ತಾರೆ.

## ೨. ಮದುವೆಯ ದಿನದ ಆಚರಣೆಗಳು ಮತ್ತು ಮದುವೆ ಹಾಡುಗಳು:

### ದಿಬ್ಬಣ :

ಮದುವೆಯ ದಿನ ಬೆಳಗ್ಗೆ ಹೆಣ್ಣಿನ ದಿಬ್ಬಣ ಹೊರಟು ಗಂಡಿನ ಮನೆಗೆ ಬರಬೇಕು. ಗಂಡಿನ ಮನೆಯಲ್ಲಿ ಮದುವೆಗೆ ಎಲ್ಲ ಸಿದ್ಧತೆಗಳು ನಡೆದಿರುತ್ತವೆ. ಗಂಡಿನ ಕಡೆಯವರು ನೀಡಿದ ಧಾರೆ ಸೀರೆ ಮತ್ತು ರವಿಕೆಯನ್ನು ತೊಟ್ಟು ಉದ್ದನೆಯ ಜಡೆಯನ್ನು ಕಟ್ಟಿ ಹೂವಿನಿಂದ ಅದನ್ನು ಅಲಂಕರಿಸಿ ಆಭರಣಗಳನ್ನು ತೊಟ್ಟುಕೊಂಡ ಹೆಣ್ಣಿಗೆ ಗಂಡಿನ ಕಡೆಯವರು ತಂದ ಕಟ್‌ಕರಿಮಣಿ

ಯನ್ನು ಕಟ್ಟುತ್ತಾರೆ. ಕುಡುಬಿಯರಲ್ಲಿ ಮದುವೆಗೆ ಮುಂಚೆ ತಾಯಿ ತನ್ನ ಮಗಳಿಗೆ ಕರಿಮಣಿ ಕಟ್ಟುವ ಸಂಪ್ರದಾಯವಿದೆ. ಈ ಕರಿಮಣಿಯು ಕಪ್ಪು ಮಣಿಗಳ ಮಧ್ಯಭಾಗದಲ್ಲಿ ಚಿನ್ನ ಅಥವಾ ಬೆಳ್ಳಿಯ ಉರುಟಾದ ಮಣಿಯಿಂದ ಕೂಡಿದ ಸರ.

ಇಲ್ಲಿ ಕೆಲವು ಪ್ರಮುಖ ಅಂಶಗಳನ್ನು ಗುರುತಿಸಬಹುದು. ಗೋವೆಯಿಂದ ಬಂದ ಗೌಡ ಸಾರಸ್ವತರನ್ನು, ರಾಜಾಪುರ ಸಾರಸ್ವತರನ್ನು ಮುಖ್ಯವಾಗಿಟ್ಟುಕೊಂಡು ನೋಡಿದರೆ ಇವರಲ್ಲಿಯೂ ತಾಯಿಮನೆಯ ಕರಿಮಣಿ ಇರುವುದು ಕಂಡುಬರುತ್ತದೆ. ಗೌಡ ಸಾರಸ್ವತರಲ್ಲಿ ತಾಯಿ ತನ್ನ ಮಗಳಿಗೆ ಕರಿಮಣಿಯನ್ನು ಕಟ್ಟುತ್ತಾಳೆ. ಮದುವೆಯ ಗಂಡು ಹಾಕುವ ಸರಕ್ಕೆ 'ಕಾಶಿತಾಳಿ' ಎಂದು ಕರೆಯುತ್ತಾರೆ. ಇದು ಕೆಂಪು ಹವಳ ಮತ್ತು ಚಿನ್ನದ ಗುಂಡುಗಳಿಂದ ಅಲಂಕೃತವಾಗಿದ್ದು ನಡುವೆ ಚೌಕಾಕಾರದ ತಾಳಿಯನ್ನು ಒಳಗೊಂಡಿದೆ.

ರಾಜಾಪುರ ಸಾರಸ್ವತರಲ್ಲಿ ತಾಯಿ ತನ್ನ ಮಗಳಿಗೆ ಗುಂಡು ಕರಿಮಣಿ ಕಟ್ಟುತ್ತಾಳೆ. ಧಾರೆಯಾದ ಬಳಿಕ ಮದುವೆ ಗಂಡು ಹೆಣ್ಣಿಗೆ ಕರಿಮಣಿಯನ್ನು ಕಟ್ಟುತ್ತಾನೆ. ಈ ಮೇಲಿನ ಮಾಹಿತಿಗಳನ್ನು ಗಮನಿಸಿದಾಗ ಇವರಲ್ಲಿ ಕೆಲವು ಸಮಾನ ಅಂಶಗಳಿರುವುದನ್ನು ಗಮನಿಸಬಹುದು. ಆದರೆ ಇಂದು ಮದುಮಗನೇ ಮದುವೆಮಂಟಪದಲ್ಲಿ ಹೆಣ್ಣಿಗೆ ತಾಳಿ ಕಟ್ಟುವ ಸಂಪ್ರದಾಯವನ್ನು ರೂಢಿಸಿ ಕೊಂಡಿರುವುದನ್ನು ಕಾಣಬಹುದು. ಈ ರೀತಿ ಶೃಂಗರಿಸಿಕೊಂಡ ಮದುಮಗಳು ದೇವರಿಗೆ ದೀಪಹಚ್ಚಿ ಕೈಮುಗಿದು ಹೊಸ್ತಿಲ ಹತ್ತಿರ ಬರುತ್ತಾಳೆ. ಹೊಸ್ತಿಲ ಹೊರಗೆ ಹುಡುಗನ ತಂದೆ ರಾಯಬಾಡಿ ಮತ್ತಿತರರು ನಿಲ್ಲುತ್ತಾರೆ. ಮದುವೆಯ ಹೆಣ್ಣು ದೇವರಿಗೆ ಹೊತ್ತಿಸಿದ ದೀಪವನ್ನು ತಂದು ಹೊಸ್ತಿಲ ಮೇಲೆ ಇಡುತ್ತಾಳೆ. ಅಲ್ಲಿ ವೀಳ್ಯದೆಲೆ, ಅಡಕೆಯನ್ನು ಇರಿಸುತ್ತಾರೆ. ಹುಡುಗನ ತಂದೆ ಆ ವೀಳ್ಯದೆಲೆಯನ್ನು ತುಂಡು ಮಾಡುತ್ತಾನೆ. ಹುಡುಗಿಯ ತಲೆಕೂದಲಿನ ಕೆಲವು ಎಳೆಗಳನ್ನು ಕತ್ತರಿಸುತ್ತಾನೆ. ಆಕೆಯ ಕೈಯಲ್ಲಿರುವ ಬಳೆಗಳನ್ನು ಒಡೆಯುತ್ತಾನೆ. ಇಲ್ಲಿ ನಡೆಯುವ ವಿಧಿಗಳು ಕುಡುಬಿಯರಲ್ಲಿ ಬಳಿಯನ್ನು ಕಡಿಯುವ ಸಂಕೇತಗಳಾಗಿ ಕೆಲಸ ಮಾಡುತ್ತವೆ. ಉಳಿದ ಜನಾಂಗದವರಿಗೆ ಇದು ಅಮಂಗಲಕರವಾದ ಸೂಚನೆಗಳಾಗಿವೆ. ಒಳಬೈಲಿನ ಪಾರ್ವತಿ ಮತ್ತು ಗಿರಿಜಾ ಇವರು ಈ ಬಗ್ಗೆ ನೀಡಿದ ಮಾಹಿತಿ ಹೀಗಿದೆ: 'ನಮ್ಮಲ್ಲಿ ಮದುವೆಯಾಗಿ ಹೋದ ಅನಂತರ ತಾಯಿಯ ಮನೆಯ ಯಾವ ಅಧಿಕಾರವೂ ಇಲ್ಲ. ಮುಂದೆ ಅವಳಿಗೆ ಗಂಡನ ಮನೆಯೇ ಗತಿಯಾಗಿರುವುದರಿಂದ ಅವಳ ತಾಯಿಮನೆಯ ಎಲ್ಲ ಸಂಬಂಧಗಳನ್ನು ಕಡಿಯುವ ಸೂಚಕವಾಗಿ ಈ ಆಚರಣೆಗಳನ್ನು ಮಾಡುತ್ತಾರೆ.' ಈ ಸಂದರ್ಭದಲ್ಲಿ ಮನೆಯ ಹೆಂಗಸರು ತುಂಬ ದುಃಖಿತರಾಗಿ ಅಳುತ್ತಾರೆ. ಮದುವೆಯ ಹುಡುಗಿ ದೀಪವನ್ನು ಆರಿಸಿ ಹೊಸ್ತಿಲನ್ನು ದಾಟಿ ಹೊರ ಬರುತ್ತಾಳೆ. ಹುಡುಗಿಯ ತಂದೆ ತನ್ನ ಮಗಳ ಕೈಯನ್ನು ಹಿಡಿದು ಆಕೆಯ ಮಾವನಿಗೆ ಒಪ್ಪಿಸುತ್ತಾನೆ. ಈ ಸಂದರ್ಭದಲ್ಲಿ ಹಾಡುವ ದುಃಖದ ಹಾಡುಗಳನ್ನು ಇಲ್ಲಿ ದಾಖಲಿಸಲಾಗಿದೆ:

ಹಾಡಿದವರು : ಭೀಮ ನಾಯ್ಕ, ರುಕ್ಮಿಣೀ ನಾಯ್ಕ, ಕುಸುವಿನ್‌ತೋಟ.

ಬಸನಿ ಪೊಸಿಲೆ ಬಸನಿ ಪೊಸಿಲೆ ಸಿದ್ಯಾ ಸೇರ್ ಅಣ್

ತ್ಯಾ ಪೊಸಿಲೆಲೆ ಪೊಸಣ ಅಚ್ಚಿ ತಾನ ನಿಸರೆಲ್

ಆಸಿನ್ ಪೊಸಿಲೆ ಆಸಿನಿ ಪೊಸಿಲೆ ದುದ್ದಲೇ ದರೆನಿ

ತ್ಯಾ ಪೊಸಿಲೆಲೆ ಪೂಸಣ ಅಚ್ಚಿ ತಾನ ನಿಸರಲೆ

ಒಳ್ಳ ಬಸನಿ ಪೊಸಿಲೆ ಒಳ್ಳ್ ಬಸನಿ ಪೊಸಿಲೆ ಅಂಡಿರಿ ಗೊಡ್ಯಾಂ ಗೀದ್

ತ್ಯಾ ಪೊಸಿಲೆಲೆ ಪೊಸಣ ಅಚ್ಚಿ ತಾನ ನಿಸರಲೆ

ಒಡ್ಲನಿ ಪೊಸಿಲೆ ಬಪ್ಲನಿ ಪೊಸಿಲೆ ಅಮ್ಮ ಪುತ್ತ ಮೂಣ್

ತ್ಯಾ ಪೊಸಿಲೆಲ ಪೊಸಣ ಅಚ್ಚಿ ತಾನ ನಿಸರಾಲೆ

ಮಸ್ಯುನಿ ಪೊಸಿಲೆ ಮಸ್ಯುನಿ ಪೊಸಿಲೆ ವರ ಬದಕ ಒನ್

ತ್ಯಾ ಪೊಸಿಲೆಲೆ ಪೊಸಣ ಅಚ್ಚಿ ತಾನ ನಿಸರಲೆ

ಬಾವನಿ ಪೊಸಿಲೆಲೆ ಬಾವನಿ ಪೊಸಿಲೆಲೆ ಯಾವಾಸ್ ಮೂಣ್

ತ್ಯಾ ಪೊಸಿಲೆಲೆ ಪೊಸಣ ಅಚ್ಚಿ ತಾನ ನಿಸರಲೆ

ಬಾಬೈಲೆನಿ ಪೊಸಿಲೆಲೆ ಬಾಬೈಲೆನಿ ಪೊಸಿಲೆಲೆ ದೋಸ್ ದೀಸ್ ನಾಣ್

ತ್ಯಾ ಪೊಸಿಲೆಲೆ ಪೊಸಣ ಅಚ್ಚಿ ತಾನ ನಿಸರಲೆ

ಈ ಹಾಡನ್ನು ಶೃಂಗರಿಸಿಕೊಂಡ ಮದುಮಗಳು ತಾನು ಹುಟ್ಟಿ ಬೆಳೆದ ಮನೆಯನ್ನು ಬಿಟ್ಟು ಗಂಡನ ಮನೆಗೆ ಹೋಗುವ ಸಂದರ್ಭದಲ್ಲಿ ಹಾಡಲಾಗುತ್ತದೆ. ಕುಡುಬಿಯರಲ್ಲಿ ಅವಿಭಕ್ತ ಕುಟುಂಬ ಪದ್ಧತಿಯಿದ್ದು, ಈಗಲೂ ಇರುವುದು ಕಂಡುಬಂದಿದೆ. ಹೀಗೆ ಅವಿಭಕ್ತ ಕುಟುಂಬದ ಒಂದು ಹೆಣ್ಣಿನ ದಿಬ್ಬಣ ಹೊರಡುವ ಸಂದರ್ಭದಲ್ಲಿ ಅವಳನ್ನು ಅಗಲುವ ಮನೆಮಂದಿ ತಾವು ಚಿಕ್ಕಂದಿನಿಂದ ಇಲ್ಲಿಯವರೆಗೆ ಆಕೆಯನ್ನು ಬೆಳೆಸಿದ ರೀತಿಯನ್ನು ಇಲ್ಲಿ ವಿವರಿಸಿದ್ದಾರೆ. ಅವಿಭಕ್ತ ಕುಟುಂಬದ ಹೆಣ್ಣಿನ ತಂದೆ, ತಾಯಿ, ದೊಡ್ಡಮ್ಮ, ದೊಡ್ಡಪ್ಪ, ಚಿಕ್ಕಪ್ಪ, ಚಿಕ್ಕಮ್ಮ, ಅಣ್ಣ ಅತ್ತಿಗೆ ಇವರ ವಿವರಗಳೂ ಬಂದಿವೆ. ತಂದೆ ತನ್ನ ಹೊಟ್ಟೆಗೆ ಸರಿಯಾಗಿ ಊಟ ಮಾಡದಿದ್ದರೂ ತನ್ನ ಮಗಳಿಗೆ ಹೊಟ್ಟೆಗೆ ಕಡಿಮೆ ಮಾಡಿ ಸಾಕಲಿಲ್ಲ. ತಾಯಿ ತನ್ನ ಎದೆಹಾಲನ್ನು ಕುಡಿಸಿ ಚೆನ್ನಾಗಿ ಬೆಳೆಸುತ್ತಾಳೆ. ದೊಡ್ಡಪ್ಪ ಅವಳೊಂದಿಗೆ ಚಿಕ್ಕ ಮಕ್ಕಳಂತೆ ಹೆಗಲ ಮೇಲೆ ಕುಳ್ಳಿರಿಸಿ ಆಡುತ್ತಾನೆ.

ದೊಡ್ಡಮ್ಮ ಆ ಮನೆಯ ಹಿರಿಸೊಸೆ ಆದ ಕಾರಣ ಮಕ್ಕಳಲ್ಲಿ ಭೇದಭಾವ ಮಾಡದೆ ತನ್ನ ಮಕ್ಕಳಂತೆ ಊಟ ತಿಂಡಿ ಕೊಟ್ಟು ಸಾಕುತ್ತಾಳೆ. ಚಿಕ್ಕಪ್ಪನು ಕೂಡ ಪ್ರೀತಿಯಿಂದ ಸಾಕಿರುತ್ತಾನೆ. ಚಿಕ್ಕಮ್ಮ ಅವಳಿಗೆ ಗೊತ್ತಿರದ ಕೆಲಸಗಳನ್ನು ಕಲಿಸಿಕೊಟ್ಟು ಆಕೆಯನ್ನು ಕೆಲಸದಲ್ಲಿ ಬುದ್ಧಿವಂತಳನ್ನಾಗಿ ಮಾಡುತ್ತಾಳೆ. ಅಣ್ಣನು ಎಲ್ಲ ಕೆಲಸಗಳಲ್ಲಿ ತಂಗಿಗೆ ನೆರವು ನೀಡುತ್ತಾನೆ. ಅತ್ತಿಗೆ ಕೆಟ್ಟ ಕೆಲಸ ಮಾಡಿದಾಗ ಬೈದು ಹೊಡೆದು ಬುದ್ಧಿ ಹೇಳುತ್ತಾಳೆ.

ಇವರೆಲ್ಲರೂ ಇಷ್ಟೊಂದು ಪ್ರೀತಿಯಿಂದ ಬೆಳೆಸಿದ ಹೆಣ್ಣಿಗೆ ಮದುವೆಯಾದ ಅನಂತರ ತಾಯಿಮನೆಯ ಎಲ್ಲ ಬಂಧನಗಳೂ ಕಡಿದು ಹೋಗುತ್ತವೆ. ಇವರಲ್ಲಿ ಮದುವೆಯಾದ ಹೆಣ್ಣಿಗೆ ತನ್ನ ತಾಯಿಮನೆಯ ಯಾವ ಅಧಿಕಾರವೂ ಇರುವುದಿಲ್ಲ. ಮದುವೆಯಾದ ಕ್ಷಣವೇ ಅವಳ ಮೇಲಿರುವ ಅಧಿಕಾರ ಕಳೆದುಹೋಗುತ್ತದೆ. ಮುಂದೆ ಅವಳಿಗೆ ಏನೇ ಕಷ್ಟಸುಖಗಳಿದ್ದರೂ ಅದು ಅವಳ ಕೈಹಿಡಿದ ಗಂಡನ ಮನೆಯಲ್ಲಿ ಎಂದು ಹೇಳುವುದೇ ಈ ಪದ್ಯದ ಸ್ವಾರಸ್ಯವಾಗಿದೆ.

ಮಾಹಿತಿದಾರರು : ವಸಂತ ನಾಯ್ಕ, ಕೊಕ್ಕರ್ಣೆ.

ಗಡೆಲಾ ಗಡೆಲಾ ರಾವೋಣಾನಿ ಮೈಕಾಲೆ ಮಿರುಗು
ಅನಿ ಕರೆಲಾ ಕರೆಲಾ ಮಿರಿಗು ಸರವೊಪಿ ಸಿರಿಂಗಾರು
ಸರವೋಲ್ ಸಿರಿಂಗಾರಾಂತು ಮಿರಿಗು ಬೈರೆವೋ ಸಾಲಾಲೆ
ಸಾಲಾಲೆ ಸಾಲಾಲೆ ಮಿರುಗು ರಾದೂರೆ ಮರೋಗಾನಿ
ಪೊವಲೆ ಪೊವಲೆ ಮಿರಿಗು ಪುಲ್ಲಾಲೆ ತಪೆಲ್ಲಾಂತು
ದೇಕೆಲಾ ದೇಕೆಲೆ ಮಿರಿಗ್ಯಾರು ಸಿಂತೇನಿ ದೇಕೆಲೆ
ಸಿಂತೇನಿ ದೇಕೊನು ಬರವೊಡು ಸಂತೊಷು ಪೊಡೊಲೊ
ಸಂದಿರಾ ಬಂತೊರಾಂತು ಉಲ್ಲೊ ಕರೋಲು
ಸಂದಿರಾ ಬಂತೋರಾಕು ಅಂಗೇಲ ಪುಲ್ಲಾ ತಡೆಲಾಂಕು
ಏಕು ಮಿರಿಗು ಕೇಳಾತು.

ಈ ಹಾಡನ್ನು ಶೃಂಗರಿಸಿಕೊಂಡ ಮದುಮಗಳನ್ನು ಎಲ್ಲರೂ ಸೇರಿ ಒಟ್ಟಿಗೆ ಮನೆಯಿಂದ ಹೊರಗೆ ಕರೆದುಕೊಂಡುಬರುವುದು, ಅನಂತರ ಆಕೆ ಸುಂದರಿಯಾಗಿ ಕಾಣುತ್ತಾಳೆ ಎನ್ನುವುದನ್ನು ವರ್ಣಿಸುತ್ತದೆ. ಮದುವೆ ದಿಬ್ಬಣ ಹೊರಡುವ ದಾರಿಯಲ್ಲಿ ಆಕೆಯನ್ನು ತಂದು ನಿಲ್ಲಿಸುವುದನ್ನು ಮತ್ತು ಆಕೆ ಹಾಡುತ್ತಾ ಆಡುತ್ತಾ ಮದುಮಗಳು ಮದುವೆ ಮಂದಿರಕ್ಕೆ ಬಂದಳು ಎಂಬುದನ್ನು ಹಾಡಿನ ಮೂಲಕ ವ್ಯಕ್ತಪಡಿಸಿರುವುದು ಕಂಡುಬರುತ್ತದೆ.

ದಿಬ್ಬಣಕ್ಕೆ ಸಂಬಂಧಿಸಿದಂತೆ ಇನ್ನೊಂದು ಹಾಡು:

ಹಾಡಿದವರು : ಬೆನೆಗಲ್ ಜಲಜಾಬಾಯಿ ಮತ್ತು ರತ್ನಾಬಾಯಿ.

ಯಾ ಕೃಷ್ಣ ದಿಬ್ಬಣ ಬೈರಿ ಓ ಸಲಾಕ
ಸರೋವರಿ ಸ್ರಂಗಾರಿನಿ ರಾಧೊ ಓ ಮಾರ್ಗಾನಿ ಸಲಾಲೆ
ಕಮಲವಂತೆ ವಟ್ರೋನಂತೂ ದಿಬ್ಬಣ ಪವಾಲೆ
ಕಮಲವಂತ ಅರಸ ದುಯೆಕು ನಿಶ್ಚಯ ಕರೆಲೆ
ಕಮಲವಂತೆ ಅರಸ ದುಯೆಕು ಲಗೆನು ಕರೆಲೆ
ಜಯ ಜಗನ್ನಾಥ ದೇವೇಂದ್ರ ಪುತ್ತಕು ಲಗೆನು ಕರ್ಕೊ
ರಾಧೊ ಮಲೊಗನಿ ಜಯ ಸಲಾಲೆ
ಕೌಂಳಿ ಇದನ ಮತ್ತೆ ಅರಸ ದುಯೆಕು ನಿಶ್ಚಯ ಕರೆಲೆ
ಕೌಂಳಿಂಕೊ ಬಿತ್ತೊಕು ವರ್ತಮಾನ ದಲ್ಲೆ
ಕೌಳಿಂಕನಿ ಕಂಸಕ್ ಯುದ್ಧ್ ನುದಲೆ
ಕೌಳಿಂಕ ದಿಬ್ಬಣ ಬೈರಿ ಸಲಾಲೆ
ಜಯ ಜಗನ್ನಾಥ ದೇವೇಂದ್ರ ಪುತ್ತಕನಿ
ಇದನ ಮತ್ತೆ ಅರಸ ದುಯೆಕು ಲಗೆನು ನಿಶ್ಚಯ ಕರೆಲೆ.

ಮದುವೆ ದಿನ ಬೆಳಗ್ಗೆ ದಿಬ್ಬಣ ಹೊರಡುವಾಗ ಹಾಡುವ ಹಾಡು. ಇದನ್ನು ಗಂಡು ಮತ್ತು ಹೆಣ್ಣಿನ ಕಡೆಯವರು ಹಾಡುತ್ತಾರೆ. ಹುಡುಗನನ್ನು ಕೃಷ್ಣನಾಗಿ ಹುಡುಗಿಯನ್ನು ರಾಧೆಯಾಗಿ ಅವರು ಕಾಣುತ್ತಾರೆ. ಇಲ್ಲಿ ಕೃಷ್ಣನ ದಿಬ್ಬಣ ಶೃಂಗಾರ ಮಾಡಿ ಹೊರಡುತ್ತದೆ. ಕಮಲವಂತೆ ಅರಸನ ಮಗಳು ಮತ್ತು ಜಯ ಜಗನ್ನಾಥ ದೇವೇಂದ್ರನ ಮಗನ ಜೊತೆಗೆ ಮದುವೆ ನಿಶ್ಚಯ ಮಾಡುತ್ತಾರೆ. ಕೌಳಿಂಕ ಅರಸನ ಅಳಿಯನಿಗೆ ವರ್ತಮಾನವಾಗುತ್ತದೆ. ಆಗ ಅವರು ಬಂದು ಕೌಳಿಂಕನಿಗೂ ಕಂಸನಿಗೂ ಯುದ್ಧವಾಗುತ್ತದೆ. ಅವರು ಸೋತು ಅವರ ದಿಬ್ಬಣ ಹೊರಗೆ ಹೋಗುತ್ತದೆ. ಜಯ ಜಗನ್ನಾಥ ದೇವೇಂದ್ರನ ಮಗನಿಗೆ ಮತ್ತು ಇದನಮತ್ತೆ ಅರಸನ ಮಗಳ ನಿಶ್ಚಯವಾಗುತ್ತದೆ.

ಈ ಹಾಡಿನಲ್ಲಿ ಪುರಾಣದ ಪಾತ್ರಗಳನ್ನು ಹೆಸರಿಸುವುದನ್ನು ಕಾಣಬಹುದು. ದೇವೇಂದ್ರ, ಕೃಷ್ಣ, ಜಯ ಜಗನ್ನಾಥ, ಕೌಳಿಂಕ, ಕಂಸ, ಇವನಮತ್ತೆ ಅರಸ ಈ ಹೆಸರುಗಳು ಬಂದಿವೆ. ಕಾಡಿನಲ್ಲಿ ವಾಸ ಮಾಡುತ್ತಿದ್ದು ಓದುಬರೆಹ ಬಾರದಿದ್ದರೂ ಕೂಡ ಕುಡುಬಿಯರಲ್ಲಿ ಮೌಖಿಕ ಪರಂಪರೆಯಾಗಿ ಸಾಹಿತ್ಯವೂ ಉಳಿದುಕೊಂಡು ಬಂದಿರುವುದನ್ನು ಗಮನಿಸಬಹುದು.

**ದಿಬ್ಬಣ ಎದುರುಗೊಳ್ಳುವುದು:**

ಮದುವೆಮನೆಯಲ್ಲಿ ಮದುಮಗನನ್ನು ಬುದ್ಯಂತ ಮತ್ತು ಮದುಮಗನ ಅಕ್ಕ ಕೆಲವೊಂದು ವಿಶಿಷ್ಟ ಉಡುಪುಗಳಿಂದ ಅಲಂಕರಿಸುತ್ತಾರೆ. ಬಿಳಿಯ ಪಂಚೆಯಿಂದ ಕಚ್ಚೆಯನ್ನು ಹಾಕಿ ಮೇಲೆ ಉದ್ದನೆಯ ನಿಲುವಂಗಿಯನ್ನು ತೊಡಿಸುತ್ತಾರೆ. ಅದರ ಮೇಲೆ ಉದ್ದನೆಯ ಶಾಲನ್ನು ಕತ್ತರಿಯಾಕಾರವಾಗಿ ಹಾಕುತ್ತಾರೆ. ಬೆಳ್ಳಿಯ ಅಥವಾ ಚಿನ್ನದ ಆಭರಣಗಳಿಂದ ಮದುಮಗನನ್ನು ಅಲಂಕರಿಸುತ್ತಾರೆ. ಮದುಮಗನಿಗೆ ಪೇಟವನ್ನು ಧರಿಸುತ್ತಾರೆ. ಹಣೆಯ ಮೇಲೆ ಮದುಮಗನ ಅಕ್ಕ ಬಾಸಿಂಗವನ್ನು ಕಟ್ಟುತ್ತಾಳೆ. ಹಣೆಗೆ ತಿಲಕವನ್ನು ಇಡುತ್ತಾಳೆ.

ಹೆಣ್ಣಿನ ಮನೆಯಿಂದ ಹೊರಟ ದಿಬ್ಬಣವು ಗಂಡಿನ ಮನೆಯಲ್ಲಿ ಮದುವೆಗಾಗಿ ಹಾಕಿದ ಚಪ್ಪರದ ಹೊರಗೆ ಬಂದು ನಿಲ್ಲುತ್ತದೆ. ಅವರನ್ನು ಗಂಡಿನ ಕಡೆಯವರು ಹೋಗಿ ಎದುರುಗೊಳ್ಳುತ್ತಾರೆ. ಅವರಿಗೆ ಕೈಕಾಲುಗಳನ್ನು ತೊಳೆಯಲು ನೀರು ಕೊಟ್ಟು ಚಪ್ಪರದಲ್ಲಿ ಕಟ್ಟಿದ ತೋರಣದ ಬಾಗಿಲಿನ ಮೂಲಕ ಅವರನ್ನು ಒಳಗೆ ಕರೆತರಲಾಗುತ್ತದೆ. ಇಲ್ಲಿ ಮಡಿವಾಳನು ನೆಲದ ಮೇಲೆ ಬಿಳಿಯ ಬಟ್ಟೆಯನ್ನು ಹಾಸುತ್ತಾನೆ. ಮದುಮಗಳ ಕೈಯನ್ನು ಹಿಡಿದು ಮದುಮಗ ಆಕೆಯನ್ನು ಬಿಳಿ ಬಟ್ಟೆಯ ಮೇಲೆ ನಡೆಸಿಕೊಂಡು ಮದುವೆಮಂಟಪಕ್ಕೆ ಕರೆತರುತ್ತಾನೆ. ಅಲ್ಲಿ ಹುಡುಗ ಅಕ್ಕಿಮುಡಿಯ ಮೇಲೆ ಹುಡುಗಿ ಭತ್ತದ ಮುಡಿಯ ಮೇಲೆ ಕುಳಿತುಕೊಳ್ಳುತ್ತಾರೆ. ಈಗ ಈ ಸಂಪ್ರದಾಯಗಳು ಇಲ್ಲ. ಆದರೆ ದಿಬ್ಬಣವನ್ನು ಎದುರುಗೊಳ್ಳುವ ಪದ್ಧತಿ ಹಿಂದಿನಂತೆ ಇಲ್ಲದಿದ್ದರೂ ಒಂದು ಕ್ರಮ ಎಂಬಂತೆ ಉಳಿದುಕೊಂಡಿದೆ.

**ಧಾರೆ:**

ಹುಡುಗಿಗೆ ಧಾರೆಯೆರೆಸಿ ಮನೆತುಂಬಿಸಿಕೊಳ್ಳುವ ಕಾರ್ಯವನ್ನು ಹುಡುಗನ ತಂದೆತಾಯಿ ಅಥವಾ ಯಜಮಾನ ಮಾಡುತ್ತಾನೆ. ರಾಯಬಾರಿ ನೆರೆದ ಬಂಧುಗಳಲ್ಲಿ ಈಗ ಧಾರೆ ಹೊಯ್ಯುತ್ತೇನೆ ಎಂದು ಒಪ್ಪಿಗೆ ಪಡೆಯುತ್ತಾನೆ. ಗಂಡಿನ ಕೈಯ ಮೇಲೆ ಹೆಣ್ಣಿನ ಕೈಯನ್ನಿಟ್ಟು ಗಂಡಿನ ತಂದೆತಾಯಿ ಕಲಶದಿಂದ ನೀರು ಎರೆಯುತ್ತಾರೆ. ಕುಡುಬಿಯರ ಮದುವೆಗಳಲ್ಲಿ ಗಂಡಿನ ಕಡೆಯವರಿಗೆ ಹೆಚ್ಚು ಕೆಲಸಕಾರ್ಯಗಳು ಇರುತ್ತವೆ.

ಈ ಧಾರೆಯೆರೆಯುವ ಸಂದರ್ಭದಲ್ಲಿ ಹಾಡುವ ಹಾಡುಗಳು ಈ ರೀತಿಯಾಗಿವೆ:

ಹಾಡಿದವರು : ದೇವು ನಾಯ್ಕ ಮತ್ತು ರುಕ್ಮಿಣಿ ನಾಯ್ಕ.

ಈಯಾವು ಅನಿ ಬಪ್ಪೊಯಿ ಮಳ್ಳಿಲೆ

ವಾವ್ವಾರದಾರ್ ವತ್ತಯ್ತುಯೇ ಮಣ್

ದಾಸಬೇ ಮುಕ್ಲೇನಿ ನಮಸ್ಕಾರ ಕಾರೆತ್

ಖಾಯ್ಲಾ ತಾಳ್ಯಾಂತ್ ಗಂಗಾಳ್....

ವೈಲಾ ತಾಳಾಂತ್ ಅಮೃತ

ನಾಗೇ ತಾಳ್ಯಾಂತ್ ಪಾಣಿಯೊ....

ತೇ ಪಾಣಿ ಬರೋನ್ ಆವೊಯ್

ಅನಿ ಬಪ್ಪೊಯ್ ವವ್ವಾರ್‌ದಾರ ಒತ್ತಾಯ್ತ

ಈ ಲಾವೊ ಕಂಕಾಣ್ ವವ್ವಾರಾಲೇಕ್ ಬಾಂದಿತ

ಈ ಅವೊಯಿ ಅನಿ ಬಪ್ಪೊಯಿ ಮೆಣ್ಯೆಲೆ

ವವ್ವಾರ್‌ಯಿಕ್ ಸೂತ್ ಸಡೊಯಿತ್

ಯೇ ದಾರ್ ಒತ್ಲೆಲಾ

ಕಾಶಿ ಗೆಲೆ ಪುಣ್ಯಾವೊ ತುಮ್ಕವೊ ಮೇಳತ್

ಹುಡುಗಿಗೆ ಧಾರೆಯೆರೆಯುವುದು ಹುಡುಗನ ತಂದೆತಾಯಿ ಅಥವಾ ಯಜಮಾನ. ತಂದೆಗಿಂತ ಹಿರಿಯರು ಯಾರಾದರೂ ಇದ್ದಲ್ಲಿ ಅವರಿಗೆ ಮೊದಲ ಪ್ರಾಶಸ್ತ್ಯ. ಅವರು ಅನುಮತಿ ನೀಡಿದ್ದಲ್ಲಿ ಉಳಿದ ಹಿರಿಯರು ಧಾರೆಯೆರೆಯಬಹುದು. ಹೀಗೆ ಧಾರೆಯೆರೆಯುವ ಸಂದರ್ಭದಲ್ಲಿ ಈ ಮೇಲಿನ ಹಾಡನ್ನು ಮುತ್ತೈದೆಯರು ಹಾಡುತ್ತಾರೆ. ತಂದೆ ಮತ್ತು ತಾಯಿ ಮದುಮಕ್ಕಳಿಗೆ ಧಾರೆಯೆರೆಯುತ್ತೇವೆ ಎಂದು ಸಭಿಕರಿಗೆ ವಂದಿಸುತ್ತಾ ಹೇಳುತ್ತಾರೆ. ಅನಂತರ ಒಂದು ತಾಮ್ರದ ತಂಬಿಗೆಯಲ್ಲಿ ನೀರನ್ನು ತೆಗೆದುಕೊಂಡು ಅದರ ಮೇಲೆ ಒಂದು ತೆಂಗಿನಕಾಯಿ ಅದರ ಸುತ್ತ ಮಾವಿನ ಎಲೆಗಳನ್ನಿಟ್ಟು ಆ ತಂಬಿಗೆಯ ನೀರಿನಿಂದ ಮದುಮಕ್ಕಳಿಗೆ ಧಾರೆಯನ್ನು ಎರೆಯುತ್ತಾರೆ. ಮತ್ತು ಅವರಿಗೆ ಕಂಕಣವನ್ನು ಕೈಗೆ ಕಟ್ಟುತ್ತಾರೆ. ಅನಂತರ ಮದುಮಗನ ತಂದೆತಾಯಿ ಹೇಳುತ್ತಾರೆ ಮದುಮಕ್ಕಳಿಗೆ ಸೂಲುಡಿಕೆ ಶಾಸ್ತ್ರ ಮಾಡುತ್ತೇವೆ ಎಂದು. ಅನಂತರ ಹೆಣ್ಣಿಗೆ ಧಾರೆಯೆರೆದವರಿ ಅವರಿಂದ ಕಾಶಿಗೆ ಹೋಗಿ ಬಂದ ಪುಣ್ಯವೂ ಸಿಗುತ್ತದೆ ಎಂದು ಹೇಳುತ್ತಾರೆ.

ಈ ಹಾಡಿನಲ್ಲಿ ಧಾರೆಯೆರೆಯುವಾಗ ಸಭಿಕರನ್ನು ವಂದಿಸಿ ತಾವು ಹೆಣ್ಣನ್ನು ಮನೆತುಂಬಿಸಿ ಕೊಳ್ಳುತ್ತೇವೆ. ನೀವೆಲ್ಲರೂ ಹರಸಬೇಕು. ಧಾರೆಯೆರೆಯುವುದು ಒಂದು ಪುಣ್ಯದ ಕೆಲಸ. ಇದರಿಂದ ಕಾಶಿಗೆ ಹೋಗಿ ಬಂದ ಪುಣ್ಯ ನಮಗೆ ಮತ್ತು ನಿಮಗೆಲ್ಲರಿಗೂ ಸಿಗುತ್ತದೆ ಎಂದು ಹೇಳಿದ್ದಾರೆ.

ಮದುವೆ ಮಂಟಪದಲ್ಲಿ ಧಾರೆಯ ಅನಂತರ ಒಂದು ಬಟ್ಟಲಲ್ಲಿ ಓಕುಳಿನೀರನ್ನು ತುಂಬಿಸಿ ಅದರಲ್ಲಿ ಒಂದು ಉಂಗುರವನ್ನು ಹಾಕಿ ವಧೂವರರು ಅದನ್ನು ಹುಡುಕಿ ತೆಗೆಯುವ ಶಾಸ್ತ್ರವಿದೆ. ಇದು ಅಪರಿಚಿತ ಗಂಡುಹೆಣ್ಣುಗಳು ಮದುವೆಯ ಬಂಧನಕ್ಕೆ ಒಳಗಾಗಿ ಹೊಸ ಬದುಕಿಗೆ ಪದಾರ್ಪಣೆ ಮಾಡುವಂತಹ ಸಂದರ್ಭದಲ್ಲಿ ಅವರ ನಡುವೆ ಪರಸ್ಪರ ಸಲಿಗೆ, ಆತ್ಮೀಯತೆ ಮತ್ತು ಸ್ಪರ್ಶ ಮಾಡಿಕೊಳ್ಳುವುದಕ್ಕಾಗಿ ಏರ್ಪಡಿಸಿದ ವಿನೋದವನ್ನು ಆಚರಣೆಯ ಪರಿಧಿಗೆ ತಂದಿದ್ದಾರೆ ಎಂದು ಹೇಳಬಹುದು.. ಹಾಗೆಯೇ ಸೇರಿಗೆ ಅಕ್ಕಿಯನ್ನು ತುಂಬಿಸಿ ಅಳತೆ ಮಾಡುವ ಶಾಸ್ತ್ರವೂ ಇದೆ. ಇದು ಸಂಪತ್ತು ಅಭಿವೃದ್ಧಿಗಾಗಿ ಮಾಡುವ ಶಾಸ್ತ್ರ. ಇಲ್ಲಿ ಅಕ್ಕಿ ಭಾರತೀಯರ ಸಂಸ್ಕೃತಿಯ ಒಂದು ಭಾಗ. ಮದುವೆಯಲ್ಲಿ ಅಕ್ಕಿಯ ಬಳಕೆಯನ್ನು ಕುರಿತು ಲೋಕದೃಷ್ಟಿ ಎನ್ನುವ ಅಧ್ಯಯನ ವಿಭಾಗದಲ್ಲಿ ಚರ್ಚಿಸಲಾಗಿದೆ.

**ಒನಕೆಯಿಂದ ಭತ್ತ ಕುಟ್ಟುವುದು:**

ಈ ಆಚರಣೆಯನ್ನು ಕುಡುಬಿಯರ ಮದುವೆಯಲ್ಲಿ ಗಂಡು ಮಾಡುತ್ತಾನೆ. ಕುಡುಬಿಯರ ಮುಖ್ಯ ವೃತ್ತಿ ಬೇಸಾಯವಾಗಿರುವುದರಿಂದ ಈ ರೀತಿಯ ಕ್ರಮಗಳಿದ್ದವು ಎನ್ನಲಾಗಿದೆ. ಹಿಂದೆ ಭತ್ತವನ್ನು ಒನಕೆಯಿಂದ ಕುಟ್ಟಿಯೇ ಅಕ್ಕಿಯನ್ನು ತಯಾರಿಸುತ್ತಿದ್ದು ದಾಗಿದೆ. ಹೀಗಾಗಿ ಕೆಲವೊಂದು ಕೃಷಿಸಂಬಂಧಿ ಆಚರಣೆಗಳನ್ನು ಹೆಣ್ಣು ಮದುವೆಯಲ್ಲಿ ನಡೆಸಿದರೆ ಕೆಲವನ್ನು ಆಚರಣೆಗಳನ್ನು ಗಂಡಿನ ಮೂಲಕ ಮಾಡಿಸಿದ್ದು ಕಂಡುಬರುತ್ತದೆ.

**ಒಪ್ಪಿಸಿಕೊಡುವುದು :**

ಮದುವೆ ಮಂಟಪದಲ್ಲಿ ಎಲ್ಲ ವಿಧಿಗಳೂ ಮುಗಿದ ಅನಂತರ ಹೆಣ್ಣನ್ನು ಗಂಡಿಗೆ ಒಪ್ಪಿಸಿಕೊಡುವ ಸಂದರ್ಭವು ಕುಡುಬಿಯರಲ್ಲಿ ಬಹಳ ದುಃಖದ ವಾತಾವರಣವನ್ನು ಸೃಷ್ಟಿಸುತ್ತದೆ. ಈ ಸಂದರ್ಭದಲ್ಲಿ, ಹುಡುಗಿಯ ತಂದೆ ಹೀಗೆ ಹೇಳುತ್ತಾನೆ: 'ನಮ್ಮ ಹುಡುಗಿಗೆ ಏನೂ ಗೊತ್ತಿಲ್ಲ. ನೀವು ಆಕೆಗೆ ಎಲ್ಲವನ್ನೂ ಕಲಿಸಿ ಸುಧಾರಿಸಿಕೊಂಡು ಹೋಗಬೇಕು. ನಮ್ಮ ಮಗಳಿಗೆ ವಿದ್ಯೆಯಿಲ್ಲ, ಬುದ್ಧಿಯಿಲ್ಲ' ಎಂದು ಹೇಳಿ ಧಾರೆಯೆರೆಸಿಕೊಂಡ ಹುಡುಗನ ತಂದೆ ತಾಯಿಯ ಕೈಗೆ ಆಕೆಯನ್ನು ಒಪ್ಪಿಸಿ ತಮ್ಮ ಮನೆಗಳಿಗೆ ಹಿಂದಿರುಗುತ್ತಾರೆ. ಇಂದಿಗೂ ಈ ಒಪ್ಪಿಸಿ ಕೊಡುವ ಮತ್ತು ಆ ಸಂದರ್ಭದಲ್ಲಿ ಮೇಲಿನ ಮಾತುಗಳನ್ನು ಹುಡುಗಿಯ ತಂದೆ ಹೇಳುವ ಸಂಪ್ರದಾಯ

ಉಳಿದುಕೊಂಡಿದೆ. ಈಗ ಮದುವೆ ಹುಡುಗನ ಮನೆಯಲ್ಲಿ ನಡೆಯದೆ ಕಲ್ಯಾಣ ಮಂಟಪಗಳಲ್ಲಿ ನಡೆಯುವುದಾದರೂ ಈ ಪದ್ಧತಿ ಇನ್ನೂ ಯಥಾರೀತಿ ಮುಂದುವರಿದಿದೆ.

ಹುಡುಗಿಯನ್ನು ಒಪ್ಪಿಸಿಕೊಟ್ಟು ಹೋಗುವಾಗ ಆಕೆಯ ಜೊತೆಗೆ ಒಬ್ಬಳನ್ನು ಬಿಟ್ಟುಹೋಗುತ್ತಾರೆ. ಆಕೆಯನ್ನು ಕುಡುಬಿ ಭಾಷೆಯಲ್ಲಿ 'ತೆತ್ತಿಗಾರ್ತಿ' ಎಂದು ಕರೆಯುತ್ತಾರೆ. ಈಕೆಗೆ ಮದುವೆದಿನ ಸಂಜೆ ಮದುಮಗ ಸೀರೆಯನ್ನು ಕೊಟ್ಟು ಗೌರವಿಸುತ್ತಾನೆ. ಇದೇ ರೀತಿ ಹುಡುಗನ ಕಡೆಯಿಂದ ಒಬ್ಬ 'ತೆತ್ತಿಗಾರ' ಇರುತ್ತಾನೆ. ಆತನನ್ನು ಗೌರವಿಸುವ ವಿವರಗಳು ಎಲ್ಲಿಯೂ ಲಭ್ಯವಾಗುವುದಿಲ್ಲ.

## ೩. ಮದುವೆಯ ಅನಂತರದ ಆಚರಣೆಗಳು ಮತ್ತು ಹಾಡುಗಳು:

ಮದುವೆಯ ದಿನ ಸಾಯಂಕಾಲ ಹುಡುಗನ ಮನೆಯಲ್ಲಿ ನಡೆಯುವ ವಿಶೇಷ ಆಚರಣೆಗಳಲ್ಲಿ **'ಮರಶ್ಯಾಸಿ'** (ಮರುಸೇಸೆ) ಒಂದು. ಹುಡುಗ ಮತ್ತು ಹುಡುಗಿಯನ್ನು ಮನೆತುಂಬಿಸಿಕೊಳ್ಳುವ ಮೊದಲು ಮದುವೆ ಚಪ್ಪರದಲ್ಲಿ ಅವರನ್ನು ಕುಳ್ಳಿರಿಸಿ ಒಂದು ಬಟ್ಟಲಲ್ಲಿ ಕುಚ್ಚಲಕ್ಕಿ, ವೀಳ್ಯ, ಅಡಿಕೆ ಮತ್ತು ಒಂದು ದೀಪವನ್ನು ಇರಿಸಿ ಸೇಸೆ ಮಾಡುತ್ತಾರೆ. ಹಿರಿಯ ಮನೆಯವರು ದೇವರ ಕೆಲಸ ಮಾಡುವವರು ಸಭೆಯ ಅನುಮತಿ ಪಡೆದು ಐದು ಸಲ ಮಣಿಗಂಟು, ಭುಜ, ತಲೆಗೆ ಕುಚ್ಚಲಕ್ಕಿಯನ್ನು ಹಾಕುತ್ತಾರೆ. ಅನಂತರ ಮದುಮಕ್ಕಳಿಗೆ ಉಡುಗೊರೆ ಕೊಡುತ್ತಾರೆ. ಇವರ ಅನಂತರ ಧಾರೆಯೆರೆದವರು ಸೇಸೆ ಹಾಕುತ್ತಾರೆ. ಇಂತಹ ಸಂದರ್ಭದಲ್ಲಿ ಬಹಳಷ್ಟು ತಮಾಶೆಯ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಾರೆ. ಇಲ್ಲಿ ಕುಡುಬಿಯರ ಹಾಸ್ಯ ಪ್ರಜ್ಞೆ ಬಹಳ ರಸವತ್ತಾಗಿ ಮೂಡಿಬರುತ್ತದೆ. ಮದುಮಕ್ಕಳಿಗೆ ಉಡುಗೊರೆ ಗಳಲ್ಲಿ ವಿಚಿತ್ರ, ಹಾಸ್ಯಾಸ್ಪದ ವಸ್ತುಗಳನ್ನು ಹಾಕಿ ತಮಾಶೆಯನ್ನು ಮಾಡುತ್ತಾರೆ. ಈ ಸಂದರ್ಭದಲ್ಲಿ ಮದುವೆಯ ಕಾರ್ಯಕ್ರಮಗಳನ್ನು ನೆರವೇರಿಸಿಕೊಟ್ಟ ರಾಯಬಾಡಿಗೆ ವಿಶೇಷ ಮರ್ಯಾದೆಯನ್ನು ನೀಡಲಾಗುತ್ತದೆ. ಈ ಸಂದರ್ಭದಲ್ಲಿ ಈ ಕೆಳಗಿನ ಹಾಡನ್ನು ಹಾಡಲಾಗುತ್ತದೆ.

ಹಾಡಿದವರು : ಗಿರಿಜಾ ಮತ್ತು ಪಾರ್ವತಿ

ಏಳ್ ಸಂದೀರ್ ಗೆಲ್ಲೊ ಏಳೆರಿ
ರಾಮಾ ಬಂದಿರಿಗೆಲ್ಲೊ ಸಾಳೆರಿ
ಸಿಂದೂರ್ ಕುಂಕುಮ ಗಾನ್ ಅಂಗಣ್
ಕೇಳತೊ ಬಾಳ್ ಕೇಳತೊ

ಜೋರೆ ಜೋ ಬಾಳ ಜೋ ಜಲ್ಲಣ
ರಾಯಿಬ್ರ ಜೋ ಬಾಳ ಜೋ ಜಲ್ಲಣ
ಯಾಕ್ ತಂಬಿ ಉದ್ದಿ ರಾಯಿಬ್ರ.

ಮದುವೆಯ 'ಮರಶ್ಯಾಸಿ' ದಿನ ಒಂದು ಸೌತೆಕಾಯಿಯನ್ನು ಒಂದು ಬಟ್ಟೆಯಲ್ಲಿ ಕಟ್ಟಿ ಅದನ್ನು ಮದುಮಗ, ಮದುಮಗಳು ಮತ್ತು ರಾಯಬಾಡಿಯ ಎದುರು ತೂಗಿ ತಮಾಶೆಯ ವಾತಾವರಣವನ್ನು ನಿರ್ಮಿಸುವಂತಹದ್ದು. ಇಲ್ಲಿ ಸೌತೆಕಾಯಿಯನ್ನು ಮಗುವಾಗಿ ಬಟ್ಟೆಯನ್ನು ತೊಟ್ಟಿಲಾಗಿ ಕಲ್ಪಿಸಲಾಗುತ್ತದೆ. ಸಂತಾನಾಭಿವೃದ್ಧಿಯ ಸೂಚಕವಾಗಿಯೂ ಕೂಡ ಇದನ್ನು ಈ ಸಂದರ್ಭದಲ್ಲಿ ನಡೆಸಲಾಗುತ್ತದೆ.

ಮರುಸೇಸೆ ಆದ ಅನಂತರ ಮದುಮಗ ಮತ್ತು ಮದುಮಗಳನ್ನು ಮನೆಯೊಳಗೆ ತುಂಬಿಸಿ ಕೊಳ್ಳುವ ಶಾಸ್ತ್ರ ಇದೆ. ಇಲ್ಲಿ ಮದುಮಗನ ಅಕ್ಕ ಮತ್ತು ಭಾವ ಬಾಗಿಲಲ್ಲಿ ಅಡ್ಡ ನಿಂತು ಇವರನ್ನು ಒಳಗೆ ಬಾರದಂತೆ ತಡೆಯುತ್ತಾರೆ. ಆಗ ಮದುಮಗ ತನ್ನ ಅಕ್ಕ ಅಥವಾ ತಂಗಿಯ ಬಳಿ 'ನಿನಗೆ ಏನು ಬೇಕಾದರೂ ಕೊಡುತ್ತೇನೆ ನಮ್ಮನ್ನು ಒಳಗೆ ಬಿಡು' ಎಂದು ಕೇಳಿಕೊಳ್ಳುತ್ತಾನೆ. ಇಲ್ಲಿ ಅಕ್ಕ ಮತ್ತು ತಮ್ಮನ ನಡುವೆ, ವಾದ, ಪ್ರಶ್ನೆಗಳು, ಉತ್ತರಗಳು, ಪ್ರತ್ಯುತ್ತರಗಳು ನಡೆಯುವುದನ್ನು ಕಾಣಬಹುದು. ಕೊನೆಗೆ ಆಕೆ ತನ್ನ ಅಣ್ಣ ಅಥವಾ ತಮ್ಮನ ಹತ್ತಿರ ನನಗೆ ಬೇಕಾದಂತಹ ವಸ್ತು ನಿನ್ನಲ್ಲಿಯೇ ಇದೆ ಎಂದು ಪರ್ಯಾಯವಾಗಿ ಹೇಳುತ್ತಾಳೆ. ಆದರೂ ಅರ್ಥ ಮಾಡಿಕೊಳ್ಳಲಿಕ್ಕೆ ಆಗದ ಸಂದರ್ಭವನ್ನು ಸೃಷ್ಟಿಸಿ ಮತ್ತೆ ತನ್ನ ಅಕ್ಕ ಅಥವಾ ತಂಗಿಯನ್ನು ಕೇಳುತ್ತಾನೆ. ಆಗ ಆಕೆ 'ನಿನಗೆ ಹುಟ್ಟಲಿರುವ ಮಗಳನ್ನು ನನ್ನ ಮಗನಿಗೆ ಕೊಡುವುದರ ಮೂಲಕ ಸಂಬಂಧವನ್ನು ಬೆಳೆಸಬೇಕು' ಎಂದು ಕೇಳುತ್ತಾಳೆ. ಆಗ ಈತ ಒಪ್ಪಿಗೆಯನ್ನು ಸೂಚಿಸಿ ಅಕ್ಕನಿಗೆ ಅಥವಾ ತಂಗಿಗೆ ವೀಳ್ಯವನ್ನು ಕೊಡುತ್ತಾನೆ. ಹೀಗಾಗಿ, ಕುಡುಬಿಯರಲ್ಲಿ ಸೋದರಸಂಬಂಧಗಳಿಗೆ ಹೆಚ್ಚು ಪ್ರಾಧಾನ್ಯವಿದೆ. ಇವತ್ತಿಗೂ ಸೋದರಮಾವನ ಮಗಳನ್ನೇ ಅವರು ಮದುವೆಯಾಗಬೇಕು. ಇಲ್ಲದಿದ್ದಲ್ಲಿ ಸಂಬಂಧಗಳು ಬಿದ್ದು ಹೋದಂತಹ ಅನೇಕ ದಾಖಲೆಗಳು ದೊರೆಯುತ್ತವೆ.

ಹೀಗೆ ಅಕ್ಕನಿಗೆ ವೀಳ್ಯವನ್ನು ಕೊಟ್ಟ ಅನಂತರ ಆತ ಹೊಸ್ತಿಲಲ್ಲಿರುವ ಅಕ್ಕಿ ಮತ್ತು ಭತ್ತದಲ್ಲಿ ಅಕ್ಕಿಯನ್ನು ಹೊರಚೆಲ್ಲುವುದರ ಮೂಲಕ ಹುಡುಗನು ಭತ್ತವನ್ನು ಒಳಚೆಲ್ಲುವುದರ ಮನೆಯನ್ನು ಪ್ರವೇಶಿಸುತ್ತಾರೆ. ಈ ರೀತಿ ಪ್ರವೇಶಿಸಿದ ಅನಂತರ ಅವರನ್ನು ದೇವರ ಮನೆಗೆ ಕರೆದುಕೊಂಡು ಹೋಗಿ ಅಲ್ಲಿ ದೀಪ ಹಚ್ಚಿ ಅವರನ್ನು ಕುಳಿತುಕೊಳ್ಳಿಸಿ 'ಎಂಜಲು ಮಾಡುವ ಶಾಸ್ತ್ರ'ವನ್ನು ನಡೆಸುತ್ತಾರೆ. ಇದಕ್ಕಾಗಿ ಸಣ್ಣ ಎರಡು ಬಾಳೆಯೆಲೆ ತುಂಡುಗಳನ್ನಿಟ್ಟು ಅದರಲ್ಲಿ ಬೆಲ್ಲ ಹಾಕಿ ಎಲೆ ಸಮೇತ ಇಬ್ಬರ ಬಾಯಿಗೆ ಹಾಕುವ ಶಾಸ್ತ್ರ ಮಾಡುತ್ತಾರೆ. ಇದನ್ನು ತಿಂದು ಅವರು ಹಾಲು ಅಥವಾ ನೀರನ್ನು ಕುಡಿಯಬೇಕು. ಈ ಸಂದರ್ಭದಲ್ಲಿ ಹಾಡುವ ಹಾಡಿನ ತುಣುಕು ಈ ರೀತಿ ಇದೆ:

ಹಾಡಿದವರು : ರುಕ್ಮಿಣಿ, ಕುಸುವಿನ್‌ತೋಟ

ಕವತ್ಕಾಯಿಚೆ ದೂದ್

ಕಾಳೆ ಕಬ್ಬು ಹಾಚೆ ಗೋಡೊ

ತಂಕ ದೊಗ್ಗಾಂಕ್ ಕರೆ ಪುಸ್ಮಾಣ್

ನೀರು ಅಥವಾ ಬೆಲ್ಲ ಹಾಲು ಕಪ್ಪು ಕಬ್ಬಿನ ಬೆಲ್ಲ ಇದನ್ನು ಅವರಿಬ್ಬರಿಗೆ ಕೊಡುವ ಉಲ್ಲೇಖಗಳು ಈ ಹಾಡಿನಲ್ಲಿ ವ್ಯಕ್ತವಾಗಿವೆ.

**ನಾಗೊಲಿ :**

ಮರುಸೇಸೆ ಆದ ಅನಂತರ ರಾತ್ರಿ ಕುಡುಬಿ ಮದುಮಗ ಮತ್ತು ಮದುಮಗಳು ನಾಗನ ಪೂಜೆ ಆರಾಧಿಸುವ ಪದ್ಧತಿಯಿದೆ. ಆ ಸಂದರ್ಭದಲ್ಲಿ ಹಾಡನ್ನು ಹಾಡುತ್ತಾರೆ:

ಹಾಡಿದವರು : ದೇವು ನಾಯ್ಕ್, ಕುಸುವಿನ್‌ತೋಟ

ಪಾಂಸಾ ಪೊಡಾಚೆ ನಾಗಾವೊ

ತಕಾ ದಿಯಾಂಯಿ ಮೆಣಾಂಯಿ

ಪಾಂಸಾ ಪೊಡಾಚೆ ನಾಗಾವೊ

ತಕಾ ದಿಯಾಂಯಿ ಕೇಳೇಚೆ ಖಾಲ್ಲೆ

ಪಾಂಸ ಪೊಡಾಚೆ ನಾಗಾವೊ

ತಕಾ ದಿಯಾಂಯಿ ಪೀಠ್ಯೊ

ಪಾಂಸಾ ಪೊಡಾಚೆ ನಾಗಾವೊ

ತಕಾ ದಿಯಾಂಯಿ ನಾರ್ಲ್ಯೊ

ಪಾಂಸಾ ಪೊಡಾಚೆ ನಾಗಾವೊ

ತಕಾ ದಿಯಾಂಯಿ ಕುಯಿಂತೊಲು

ಪಾಂಸಾ ಪೊಡಾಚೆ ನಾಗಾವೊ

ತಕಾ ದಿಯಾಂಯಿ ಮುಸ್ಕು

ಪಾಂಸಾ ಪೊಡಾಚೆ ನಾಗಾವೊ

ನಾಗಾ ದಿಯಾಂಯಿ ಮುಟ್ಟಿ

ಮದುವೆಯಾಗಿ ಮರುಸೇಸೆಯಾದ ಅನಂತರ ಮದುಮಕ್ಕಳು ನಾಗನ ಪೂಜೆ ಮಾಡುವ ಕ್ರಮವಿದೆ. ಮದುವೆಯ ಚಪ್ಪರದಲ್ಲಿ ಧಾರೆಮಂಟಪವನ್ನು ನಿರ್ಮಾಣ ಮಾಡಿದ ಮಡಿವಾಳ ಮತ್ತೆ ಮದುವೆ ಸಂದರ್ಭದಲ್ಲಿ ಹೆಣ್ಣಿನ ದಿಬ್ಬಣವನ್ನು ಎದುರುಗೊಳ್ಳುವಾಗ ಬಿಳಿವಸ್ತ್ರವನ್ನು ಹಾಸುವುದರ ಮೂಲಕ ವ್ಯಕ್ತವಾಗುತ್ತಾನೆ. ಕೊನೆಯಲ್ಲಿ ನಾಗನ ಪೂಜೆಯ ಸಂದರ್ಭದಲ್ಲಿ ಆತನೇ ಈ ಪೂಜೆಯನ್ನು ನೆರವೇರಿಸಿ ಕೊಡುವುದನ್ನು ಕಾಣಬಹುದು. ಈ ಪೂಜೆಯಲ್ಲಿ ನಾಗನಿಗೆ ಪ್ರಿಯವಾದ ವಸ್ತುಗಳನ್ನು ಬಳಸುವ ಬಗ್ಗೆ ಹಾಡಿನ ಮೂಲಕ ಅದನ್ನು ವ್ಯಕ್ತಪಡಿಸಿದ್ದಾರೆ. ಇವನ್ನೆಲ್ಲ ನಾಗನಿಗೆ ಸಮರ್ಪಿಸಿ ಮದುಮಕ್ಕಳನ್ನು ಕುಳ್ಳಿರಿಸಿ ಅವರನ್ನು ಬಿಳಿಯ ಶುಭ್ರ ವಸ್ತ್ರದಿಂದ ಮುಚ್ಚುತ್ತಾರೆ. ನಾಗಾರಾಧನೆ ತುಳುನಾಡಿನಲ್ಲಿ ಸಂತಾನಾಭಿವೃದ್ಧಿಯ ಸಂಕೇತವಾಗಿ ಆಚರಣೆಗೊಳ್ಳುತ್ತಿರುವುದನ್ನು ಕಾಣಬಹುದು. ಈ ನಿಟ್ಟಿನಲ್ಲಿ ಹೊಸತಾಗಿ ಮದುವೆಯಾಗಿರುವ ಮದುಮಕ್ಕಳು ಕೂಡ ಈ ಆಚರಣೆಯನ್ನು ಮಾಡುವುದರ ಜೊತೆಗೆ ಬದುಕಿನ ಒಂದು ಅವಿಭಾಜ್ಯ ಅಂಗವಾದ ಸಂತಾನಾಭಿ ವೃದ್ಧಿಯ ಕುರಿತ ಬಯಕೆಯನ್ನು ಅವರಲ್ಲಿ ಹುಟ್ಟಿಸುವುದು ಹಾಗೂ ಸಂತಾನಾಭಿವೃದ್ಧಿಗೆ ನಾಗದೇವರ ಅನುಗ್ರಹವನ್ನು ಪಡೆಯುವುದು ಈ ಆಚರಣೆಯಲ್ಲಿ ವ್ಯಕ್ತವಾಗಿರುವುದನ್ನು ಕಾಣಬಹುದು.

ಮದುವೆಯ ದಿನ ಸಂಜೆ ಪ್ರಸ್ತಕ್ಕಿಂತ ಮೊದಲು ಮನೆಯ ಮದುಮಗಳನ್ನು ಮನೆಯ ಹೆಂಗಸರು ಬಾವಿಕಟ್ಟೆ ಹತ್ತಿರ ಕರೆದುಕೊಂಡುಹೋಗಿ ಆಕೆಯ ಧಾರೆ ಸೀರೆಯನ್ನು ಬಿಚ್ಚಿ ಗೇಂಟಿ ಹಾಕಿ ಕನಕಾಂಬರ ಹೂವನ್ನು ಮುಡಿಸುತ್ತಾರೆ. ಈ ಹೊತ್ತಿನಲ್ಲಿ ಹುಡುಗನ ತಾಯಿ ಆಕೆಗೆ ಹೊಸ ಹೆಸರಿಡುವ ಪದ್ಧತಿ ಇದೆ. ಆ ಸಂದರ್ಭದಲ್ಲಿ ಈ ಹಾಡನ್ನು ಹಾಡುತ್ತಾರೆ.

ಹಾಡಿದವರು : ರುಕ್ಮಿಣಿ, ಕುಸುವಿನ್‌ತೋಟ

ದೇ ಕುಂಟೇತ ಕಾಳಾ ಸಿಂತರಾಣೆ ಒಂನಿ ಗಾಂತೀತ ಪೋಡೊ

ಲೇ ಕಶೆ ಪುಲ್ಲೆ ಮಳ್ಳರಿ

ಅಬೊಲು ಪೋಲು.

ಇಲ್ಲಿ ಕನಕಾಂಬರ ಹೂವಿನ ಮಹತ್ತ್ವದ ಕುರಿತು ತಿಳಿಸಲಾಗಿದೆ. ಮದುವೆಯಾದ ಹೆಣ್ಣು ತನ್ನ ಶೃಂಗಾರವನ್ನೆಲ್ಲ ತೆಗೆದು ಕುಡುಬಿಯರ ಸಂಪ್ರದಾಯದಂತೆ ಗೇಂಟಿ ಸೀರೆಯನ್ನು ಉಟ್ಟುಕನಕಾಂಬರ ಹೂವನ್ನು ಮುಡಿದು ಮುತ್ತೈದೆಯಾಗಿ ಬದುಕನ್ನು ಆರಂಭಿಸುವ ಹಂತ.

**ಪ್ರಸ್ತ :**

ಇದು ವಿವಾಹಕಾರ್ಯಕ್ರಮಗಳ ಕೊನೆಯ ಹಂತ. ಸಮಾಜದಲ್ಲಿ ಸಂತಾನಾಭಿವೃದ್ಧಿ ಮತ್ತು ಆರೋಗ್ಯಕರವಾದ ದೈಹಿಕ-ಮಾನಸಿಕ ಸುಖಕ್ಕಾಗಿ ಗಂಡು ಮತ್ತು ಹೆಣ್ಣನ್ನು ಒಂದು ಪ್ರಾಪ್ತ ವಯಸ್ಸಿನಲ್ಲಿ ಮದುವೆಯೆನ್ನುವ ಒಂದು ಚೌಕಟ್ಟಿಗೆ ಒಳಪಡಿಸುವ ಧಾರ್ಮಿಕ ಆಚರಣೆ. ಕುಡುಬಿ ಜನಾಂಗದಲ್ಲಿ ಪ್ರಸ್ತಕ್ಕೆ ಒಂದು ವಿಶಿಷ್ಟ ಸಂದರ್ಭವಿದೆ. ಇವರಲ್ಲಿ ಹಿಂದೆ ಮದುವೆಯಾದ ತತ್‌ಕ್ಷಣ ಲೈಂಗಿಕ ಸಂಪರ್ಕಗಳನ್ನು ಏರ್ಪಡಿಸುವುದಿಲ್ಲ. ಉಡುಪಿ ಜಿಲ್ಲೆಯಲ್ಲಿ ಪ್ರಸಿದ್ಧವಾಗಿರುವ ವಂಡಾರು ಕಂಬಳಕ್ಕೆ ಮದುಮಕ್ಕಳು ಹೋಗಿ ಕಂಬಳದ ಗದ್ದೆಯ ಸುತ್ತ ಅಕ್ಕಿ ಚೆಲ್ಲಿ (ಇದನ್ನು 'ಸುತ್ತಕ್ಕಿ' ಎಂದು ಕರೆಯುತ್ತಾರೆ) ಗಂಡು ಕಂಬಳದ ಕೋಣಗಳ ಹಲಗೆ ಮೆಟ್ಟಿ ಬರಬೇಕು. ಆ ನಂತರವೇ ಪ್ರಸ್ತವನ್ನು ಇಟ್ಟುಕೊಳ್ಳುತ್ತಿದ್ದರು. ಈ ಮಾಹಿತಿಗೆ ಹೆಚ್ಚು ಅಧಿಕೃತತೆ ಬರುವಲ್ಲಿ ಕ್ಷೇತ್ರಕಾರ್ಯವನ್ನು ನಡೆಸಿದ ಸಂದರ್ಭದಲ್ಲಿ ಮಾಹಿತಿದಾರರೆಲ್ಲ ನೀಡಿದ ಮಾಹಿತಿಗಳನ್ನು ಸಂಗ್ರಹಿಸಿ ಹೇಳುವುದಾದರೆ, ಸುಮಾರು ಹತ್ತು ವರ್ಷಗಳ ಹಿಂದೆ ಮದುವೆಯಾದ ಕುಡುಬಿಯರಲ್ಲಿ ಹೆಚ್ಚಿನವರು ಮದುವೆಯ ದಿನದಿಂದ ವಂಡಾರು ಕಂಬಳದವರೆಗೆ ಕಾದೇ ಪ್ರಸ್ತವನ್ನು ನಡೆಸಿದ ಉದಾಹರಣೆಗಳಿವೆ. ಈ ಅವಧಿ ಐದು ಆರು ತಿಂಗಳ ಕಾಲದವರೆಗೂ ವಿಸ್ತರಿಸಿದ್ದುದು ಕಂಡುಬಂದಿದೆ. ಇದನ್ನು ಅವರು ಬಹಳ ನಾಚಿಕೆಯಿಂದ ವಿವರಿಸಿದ್ದಾರೆ. ಕೆಲವೊಮ್ಮೆ ಹಲಗೆಯನ್ನು ಮೆಟ್ಟಿ ಮದುವೆ ಹುಡುಗ ಬಿದ್ದರೆ ಮತ್ತೆ ಒಂದು ವರ್ಷ ಆತ ಕಾದು ಮುಂದಿನ ಕಂಬಳದಲ್ಲಿ ಅದನ್ನು ಗೆದ್ದು ಬರಬೇಕು.

ಹೀಗೆ ನಮಗೆ ತಿಳಿದಿರುವ ಅನೇಕ ಜನಾಂಗ, ಜಾತಿ, ವರ್ಗ, ಪಂಗಡಗಳ ಜನರಲ್ಲಿ ಕಾಣದೆ ಇರುವ ಇನ್ನೂ ಕೆಲವೆಡೆ ಸಾಮ್ಯವಿರುವ ಅನೇಕ ವಿಧಿವಿಧಾನಗಳನ್ನು ಹೊಂದಿರುವ ಕುಡುಬಿ ಜನಾಂಗದವರ ಮದುವೆ ಒಂದು ವೈಶಿಷ್ಟ್ಯಪೂರ್ಣ, ಅಧ್ಯಯಯನಯೋಗ್ಯ ವಿಷಯವಾಗಿದೆ ಎನ್ನಬಹುದು. ಅವರಲ್ಲಿ ಮದುವೆ ಸಂದರ್ಭದಲ್ಲಿ ಹಾಡುವ ಹಾಡುಗಳು ಅವರ ಸಂಸ್ಕೃತಿಯ ಅವಿಭಾಜ್ಯ ಅಂಗಗಳಾಗಿದ್ದುವು ಎಂಬುದನ್ನು ಗುರುತಿಸಬಹುದು.

ಆಧುನಿಕತೆಯ ಬಿರುಗಾಳಿಗೆ ಸಿಲುಕಿ ಈವರೆಗೆ ದಾಖಲಿಸಿದ ಎಲ್ಲ ಪದ್ಧತಿಗಳೂ ಇಂದು ಮೂಲ ರೂಪದಲ್ಲಿ ಉಳಿಯದೆ ಅನೇಕ ಮಾರ್ಪಾಡುಗಳೊಂದಿಗೆ ಜೀವಂತವಾಗಿರುವುದನ್ನು ಒಂದಲ್ಲ ಒಂದು ರೂಪದಲ್ಲಿ ಜೀವಂತವಾಗಿರುವುದನ್ನು ಕಂಡುಕೊಳ್ಳಬಹುದು. ಸುಮಾರು ಇಪ್ಪತ್ತು ವರ್ಷಗಳಿಂದ ಕುಡುಬಿಯರ ಮದುವೆಗಳು ಕಲ್ಯಾಣಮಂಟಪಗಳಲ್ಲಿ ನಡೆಯುತ್ತಿದ್ದು ವೈದಿಕ ಸಂಪ್ರದಾಯದ ಪ್ರಕಾರ ಎಲ್ಲ ವಿಧಿವಿಧಾನಗಳನ್ನು ಅವರು ತಮ್ಮದಾಗಿಸಿಕೊಂಡಿರುವುದರಿಂದಾಗಿ ಬಹಳಷ್ಟು ಮಾರ್ಪಾಡುಗಳು ಉಂಟಾಗಿವೆ. ಹೀಗಾಗಿ ಮದುವೆಯ ಸಂಬಂಧಿ ಆಚರಣೆಗಳನ್ನು ಮತ್ತು ಹಾಡುಗಳನ್ನು ನನ್ನ ಅಧ್ಯಯನ ವ್ಯಾಪ್ತಿಗೆ ಒಳಪಟ್ಟಂತೆ ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿ ಈ ಅಧ್ಯಯನದುದ್ದಕ್ಕೂ ಅದನ್ನು ಬಳಸಿಕೊಳ್ಳಲಾಗಿದೆ.

* * *

ಅಧ್ಯಾಯ ನಾಲ್ಕು

# ಕುಡುಬಿಯರ ಮದುವೆ ಹಾಡುಗಳಲ್ಲಿ ವ್ಯಕ್ತವಾಗುವ ಲೋಕದೃಷ್ಟಿ

ಲೋಕದೃಷ್ಟಿ ಒಂದು ಪರಿಕಲ್ಪನೆಯಾಗಿ ಜಾನಪದ ಅಧ್ಯಯನದಲ್ಲಿ ಬಳಕೆಯಗುತ್ತಾ ಬಂದಿರುವುದನ್ನು ಕಾಣಬಹುದು. ಕನ್ನಡ ಜಾನಪದದಲ್ಲಿ ಲೋಕದೃಷ್ಟಿ ಎಂಬ ಪದವನ್ನು ಇಂಗ್ಲಿಷಿನ World View ಎನ್ನುವ ಪದಕ್ಕೆ ಸಂವಾದಿಯಾಗಿ ಬಳಸಲಾಗುತ್ತದೆ. ಈ ಪದವನ್ನು ವಿಶ್ವಪರಿಕಲ್ಪನೆ, ವಿಶ್ವದೃಷ್ಟಿ, ವಿಶ್ವದರ್ಶನ, ದೃಷ್ಟಿಕೋನ, ಮನೋಧರ್ಮ ಮುಂತಾಗಿ ವಿದ್ವಾಂಸರು ಬಳಸುತ್ತಿದ್ದುದು ಕಂಡುಬರುತ್ತದೆ.

ಜನಪದರು ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಲೋಕದ ಬಗೆಗೆ ಹೊಂದಿರುವ ದರ್ಶನವನ್ನು ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಲೋಕದ ಬಗೆಗೆ ಹೊಂದಿರುವ ದರ್ಶನವನ್ನು ಲೋಕದೃಷ್ಟಿ ಎನ್ನಬಹುದು. ಇದು ಜನಾಂಗದಿಂದ ಜನಾಂಗಕ್ಕೆ, ಸಂಸ್ಕೃತಿಯಿಂದ ಸಂಸ್ಕೃತಿಗೆ, ವರ್ಗ, ಜಾತಿಗಳಿಗೆ ಅನುಗುಣವಾಗಿ ಬದಲಾವಣೆಗಳಾಗಬಹುದು ಎಂದು ಪುರುಷೋತ್ತಮ ಬಿಳಿಮಲೆ ಅವರು ತಮ್ಮ 'ಜಾನಪದರಲ್ಲಿ ಲೋಕದೃಷ್ಟಿ' ಎನ್ನುವ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

ಈ ಅಭಿಪ್ರಾಯಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಬುಡಕಟ್ಟು ಜನಾಂಗಕ್ಕೆ ಸೇರಿದ ಕುಡುಬಿಯರ ಮದುವೆಯ ಹಾಡುಗಳಲ್ಲಿ ವ್ಯಕ್ತವಾಗಿರುವ ಲೋಕದೃಷ್ಟಿಯನ್ನು ಕುರಿತು ಅಧ್ಯಯನ ನಡೆಸಲಾಗಿದೆ.

ಮದುವೆ ಪ್ರತಿಯೊಬ್ಬ ವ್ಯಕ್ತಿಯ ಬದುಕಿನ ಅತ್ಯಂತ ಮುಖ್ಯ ಘಟ್ಟ. ಹಾಗಾಗಿ ಮದುವೆಗೆ ಎಲ್ಲಿಲ್ಲದ ಸಿದ್ಧತೆ ನಡೆಯುತ್ತದೆ. ಮದುವೆ ದಿನ ನಿರ್ಧಾರವಾದ ಬಳಿಕ ಮದುಮಗ ಮತ್ತು ಮದುಮಗಳ ಮನೆಯಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಮದುವೆ ತಯಾರಿಗಳು ನಡೆಯುತ್ತವೆ. ಈ ತಯಾರಿಗಳು ಪ್ರತಿಯೊಂದು ಜಾತಿ, ಜನಾಂಗ, ಬುಡಕಟ್ಟುಗಳಲ್ಲಿ ಭಿನ್ನವಾಗಿರುವುದನ್ನು ಗಮನಿಸಬಹುದು. ಇಂದು ಕುಡುಬಿಯರ ಮದುವೆಗಳು ಕಲ್ಯಾಣ ಮಂಟಪಗಳಲ್ಲಿ ನಡೆಯುವುದರಿಂದ

ಹಿಂದೆ ನಡೆಯುತ್ತಿದ್ದಂತೆ ಮದುವೆಗೆ ಪೂರ್ವಸಿದ್ಧತೆಗಳು ಬಹಳ ಕಡಿಮೆಯಾಗಿವೆ. ಇವರಲ್ಲಿ ಮದುವೆ ನಿಶ್ಚಯವಾಗುವುದೇ ವೀಳ್ಯವನ್ನು ಬದಲಾಯಿಸಿಕೊಳ್ಳುವ ಮೂಲಕ. ಈ ವೀಳ್ಯ ಬದಲಾಯಿಸುವುದನ್ನು ಕುಡುಬಿಯರು 'ಈಡೊ' ಎಂದು ಕರೆಯುತ್ತಾರೆ. ಮೂರು ವೀಳ್ಯದೆಲೆಗಳು ಮತ್ತು ಒಂದು ಅಡಿಕೆಯನ್ನು ಒಟ್ಟು ಸೇರಿಸಿ ಕೊಡುತ್ತಾರೆ. ಇಲ್ಲಿ ವೀಳ್ಯ ಮತ್ತು ಅಡಿಕೆಯು ಸಂಬಂಧವನ್ನು ಬೆಸೆಯುವ ಸಂಕೇತವಾಗಿದೆ. ಎರಡು ಭಿನ್ನ ಬಳಿಯವರು ಒಂದುಗೂಡುವ ಸಂಕೇತವಾಗಿ ಮಂಗಳಕರ ವಸ್ತುಗಳಾದ ಅಡಿಕೆ ಮತ್ತು ವೀಳ್ಯವನ್ನು ಬದಲಾಯಿಸಿಕೊಳ್ಳುವ ವಿಧಿ ನಡೆಯುತ್ತದೆ.

ಮದುವೆಯಲ್ಲಿ ಬಳಿ ನೋಡುವ ಪದ್ಧತಿ ಇದ್ದು ಒಂದೇ ಬಳಿಗಳೊಳಗೆ ಗಂಡು-ಹೆಣ್ಣಿನ ನಡುವೆ ಮದುವೆಗಳು ಏರ್ಪಡುತ್ತಿರಲಿಲ್ಲ. ಒಂದೇ ಬಳಿಯವರು ರಕ್ತಸಂಬಂಧಿಗಳು ಎಂಬ ನಂಬಿಕೆ ಇದಕ್ಕೆ ಕಾರಣವಾಗಿದೆ. ಈ ನಂಬಿಕೆಗೆ ಕೆಲವು ಘಟನೆಗಳು ಸಾಕ್ಷಿಯಾಗಿರಬಹುದು. ಒಂದೇ ಬಳಿಯವರು ವಿವಾಹವಾಗಿ ಅವರಲ್ಲಿ ಹುಟ್ಟುವ ಮಕ್ಕಳಲ್ಲಿ ಏನಾದರೂ ತೊಂದರೆ ಗಳಾಗಿದ್ದರೆ ಇದನ್ನೇ ಮುಖ್ಯವಾಗಿಟ್ಟುಕೊಂಡು ಮುಂದೆ ಭಿನ್ನ ಬಳಿಯವರು ಮಾತ್ರ ಮದುವೆಯಾಗಬೇಕು ಎನ್ನುವ ಕಲ್ಪನೆಗಳು ಬೆಳೆದುಕೊಂಡುಬಂದಿರುವ ಸಾಧ್ಯತೆಗಳಿವೆ. ಇಂದು ವಿಜ್ಞಾನವು ಇದಕ್ಕೆ ಮಾನ್ಯತೆಯನ್ನು ನೀಡುವುದನ್ನು ಗಮನಿಸಿದರೆ ಇಲ್ಲಿ ಕುಡುಬಿಯರ ಬಹಳ ಆಳವಾದ ಗ್ರಹಿಕೆಯನ್ನು ಗಮನಿಸಬಹುದು.

"ಮದುವೆಯಂತಹ ಒಂದು ಆಚರಣೆಯಲ್ಲಿ ಕಾಲ ಮತ್ತು ಸ್ಥಳಗಳನ್ನು ಪ್ರತ್ಯೇಕಿಸುವ ಕೆಲಸವನ್ನು ಲಗ್ನಮುಹೂರ್ತ, ಚಪ್ಪರ, ಧಾರೆಮಂಟಪ, ವಾದ್ಯ, ವಾಲಗಗಳ ಮೂಲಕ ಮಾಡುತ್ತಾರೆ" ಎಂದು ಡಾ। ರಾಜಶ್ರೀ ಅವರು ತಮ್ಮ 'ತುಳು ಜಾನಪದ ಕಾವ್ಯಗಳಲ್ಲಿ ಪ್ರಕಟವಾದ ಲೋಕದೃಷ್ಟಿಯ ಸ್ವರೂಪ' ಎಂಬ ಸಂಶೋಧನ ಪ್ರಬಂಧದಲ್ಲಿ ಹೇಳಿದ್ದಾರೆ.

ಕುಡುಬಿಯರ ಮದುವೆಗಳು ಗಂಡಿನ ಮನೆಯಲ್ಲಿಯೇ ನಡೆಯುತ್ತಿದ್ದವು. ಮದುವೆಯ ಹಿಂದಿನ ದಿನ ಊರಿನ ಜನರೆಲ್ಲ ಸೇರಿ ತೆಂಗಿನ ಗರಿಗಳಿಂದ ಚಪ್ಪರವನ್ನು ಹಾಕಿ ಮಾವಿನ ಎಲೆಗಳ ತೋರಣವನ್ನು ಕಟ್ಟುತ್ತಿದ್ದರು. ಇದು ಮದುಮಗಳ ಮನೆಯಲ್ಲಿಯೂ ನಡೆಯುತ್ತಿತ್ತು. ಇಲ್ಲಿ ಚಪ್ಪರಕ್ಕೆ ಬಳಸುವಂತಹ ತೆಂಗಿನ ಗರಿಗಳು, ಮಾವಿನ ಎಲೆಗಳು ಅವರ ಸಂಸ್ಕೃತಿಯ ಅವಿಭಾಜ್ಯ ಅಂಗಗಳಾಗಿವೆ. ಅವರು ತಮ್ಮ ದೈನಂದಿನ ಬದುಕಿನಲ್ಲಿ ಅವುಗಳಿಂದ ಪ್ರಭಾವಿತ ರಾಗಿರುತ್ತಾರೆ. ತೆಂಗು ಕಲ್ಪವೃಕ್ಷ, ಬೇಡಿದ್ದನ್ನು ಕೊಡುವ ವೃಕ್ಷ, ಅದು ದೇವಲೋಕದಿಂದ ಬಂದದ್ದು ಎನ್ನುವ ಭಾವನೆಗಳೊಂದಿಗೆ ಅದರ ಉಪಯೋಗಗಳು ಅನೇಕ. ಮಾವಿನ ಎಲೆಗಳು ಶುಭಸೂಚಕವಾಗಿ ಇವುಗಳನ್ನು ಪ್ರತಿಯೊಂದು ಶುಭಕಾರ್ಯಗಳಲ್ಲಿ ಬಳಸುತ್ತಿರುವುದನ್ನು ಕಾಣಬಹುದಾಗಿದೆ. ಇಂತಹವುಗಳನ್ನು ಮದುವೆ ಚಪ್ಪರದಲ್ಲಿ ಬಳಸುವ ಮೂಲಕ ಮದುಮಕ್ಕಳ ಏಳಿಗೆಯನ್ನು, ಶ್ರೇಯಸ್ಸನ್ನು ಬಯಸುವ ಸೂಚನೆಯನ್ನು ನೀಡುವುದನ್ನು ಗಮನಿಸಬಹುದು.

ಮದುವೆಯ ದಿನ ಮದುಮಗ ಮತ್ತು ಮದುಮಗಳಿಗೆ ಮಾಡುವ ಶೃಂಗಾರ ಅವರನ್ನು ಉಳಿದ ಜನರಿಂದ ಪ್ರತ್ಯೇಕಿಸುತ್ತದೆ. ಉಳಿದ ಸಭಿಕರು ಉಡುವ ಉಡುಗೆತೊಡುಗೆಗಳಿಗಿಂತ, ಧರಿಸುವ ಆಭರಣಗಳಿಗಿಂತ ಭಿನ್ನವಾದ ಉಡುಗೆತೊಡುಗೆಗಳನ್ನು ಮತ್ತು ಶೃಂಗಾರವನ್ನು ಇವರಿಗೆ ಮಾಡುತ್ತಾರೆ.

ಮರುದಿನ ಮದುಮಕ್ಕಳಿಗೆ ಧಾರೆಯೆರೆಯುವ ವಿಧಿಯು ಸಂಬಂಧವನ್ನು ಬೆಸೆಯುವ ಕೆಲಸವನ್ನು ಮಾಡುತ್ತದೆ. ಕುಡುಬಿಯರಲ್ಲಿ ಹುಡುಗನ ತಂದೆತಾಯಿ ತಮ್ಮ ಸೊಸೆಯಾಗಿ ಬರುವ ಮದುಮಗಳಿಗೆ ಧಾರೆಯೆರೆದು ಮನೆತುಂಬಿಸಿಕೊಳ್ಳುತ್ತಾರೆ. ಇಲ್ಲಿ ಅವರ ಲೋಕದೃಷ್ಟಿ ಈ ರೀತಿ ವ್ಯಕ್ತವಾಗುತ್ತದೆ. ಅವರ ಪ್ರಕಾರ ಅವರಲ್ಲಿ ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ. ಅವಳಿಗೆ ಮತ್ತೆ ತಾಯಿಮನೆಯ ಯಾವ ಅಧಿಕಾರವೂ ಇಲ್ಲ. ಕಷ್ಟಸುಖ ಏನಿದ್ದರೂ ಗಂಡನ ಮನೆಯಲ್ಲಿಯೇ ಇರಬೇಕು. ಹೀಗಾಗಿ ಅವರು ಹುಡುಗಿಯನ್ನು ತರುವಾಗ ಹುಡುಗಿಯ ತಂದೆತಾಯಿಗೆ 'ತೆರ' (ವಧುದಕ್ಷಿಣೆ) ನೀಡಿ ತರುತ್ತಾರೆ. ಹೀಗಾಗಿ ತೆರ ನೀಡಿದ ಅನಂತರ ಅವಳನ್ನು ಇವರು ಕೊಂಡುಕೊಂಡಂತೆ. ಅವಳಿಗೆ ಧಾರೆಯೆರೆಸಿ ಹುಡುಗನ ತಂದೆತಾಯಿ ಮನೆತುಂಬಿಸಿಕೊಳ್ಳುತ್ತಾರೆ.

ಧಾರೆಯೆರೆಯುವ ವಿಧಿಯು ಸಂಬಂಧವನ್ನು ಬೆಸೆಯುವ ಕೆಲಸವನ್ನು ಸಾಂಕೇತಿಕವಾಗಿ ಮಾಡುತ್ತದೆ. ಮದುವೆಯಲ್ಲಿ ಬಳಸುವ ಅಕ್ಕಿ ಪ್ರಧಾನ ಪಾತ್ರವನ್ನು ವಹಿಸುತ್ತದೆ. ಹಸಿವೆಯನ್ನು ನೀಗುವ ಅಕ್ಕಿಯು ಶಕ್ತಿಯನ್ನು ನೀಡುತ್ತದೆ. ಜೀವಧಾತು ಆಗಿರುವ ಮತ್ತು ಉತ್ಪಾದನಾ ಘಟಕವಾಗಿ ರುವ ಅಕ್ಕಿಯ ಒಡೆತನ ಮತ್ತು ಅದರ ಶಕ್ತಿಯನ್ನು ನವವಧೂವರರಿಗೆ ದಾಟಿಸುವ ಸಾಂಕೇತಿಕ ಅಭಿವ್ಯಕ್ತಿಯಾಗಿ ಅಕ್ಕಿಯನ್ನು ಸೇಸೆಯಲ್ಲಿ ಬಳಸುತ್ತಾರೆ. ಕುಡುಬಿಯರ ಮದುವೆಯಲ್ಲಿ ವಿವಿಧ ಸಂದರ್ಭಗಳಲ್ಲಿ ಬಳಕೆಯಾಗುವ ಬಾಳೆ, ಹಾಲು, ಅಡಿಕೆ, ವೀಳ್ಯ, ತೆಂಗಿನಕಾಯಿ, ಹಿಂಗಾರ (ಅಡಕೆಯ ಹೂ) ಅಕ್ಕಿ –ಈ ಎಲ್ಲ ವಸ್ತುಗಳು ಸಂತಾನಾಭಿವೃದ್ಧಿ, ಸಮೃದ್ಧಿ, ಸಂಬಂಧ ಬೆಸೆಯುವ ಮತ್ತು ಕುಟುಂಬ ಮುಂದುವರಿಕೆಯ ಆಶಯವನ್ನು ವ್ಯಕ್ತಪಡಿಸುತ್ತವೆ. ಕುಡುಬಿಯರಲ್ಲಿ ಮದುವೆಯ ಗಂಡು ಒನಕೆಯಿಂದ ಭತ್ತ ಕುಟ್ಟುವ ಆಚರಣೆಯನ್ನು ಮಾಡುತ್ತಾನೆ. ಇಲ್ಲಿ ಆತ ಬಳಸುವ ಒನಕೆ ಮತ್ತು ಭತ್ತ ಇದು ಕುಡುಬಿಯರ ಮುಖ್ಯ ವೃತ್ತಿ ವ್ಯವಸಾಯವಾಗಿರುವುದನ್ನು ಸೂಚಿಸುತ್ತದೆ. ಹಾಗೂ ಕುಡುಬಿಯರು ಶ್ರಮಜೀವಿಗಳು ಎನ್ನುವುದನ್ನು ಸಾಂಕೇತಿಕವಾಗಿ ಸೂಚಿಸುತ್ತದೆ. ಧಾರೆಮಂಟಪದಲ್ಲಿ ಅಕ್ಕಿ ಮತ್ತು ಭತ್ತದ ಮುಡಿ(ಅಕ್ಕಿ ಅಥವಾ ಭತ್ತವನ್ನು ಬೈಹುಲ್ಲಿನ ವಿಶೇಷ ಕಟ್ಟಿನಲ್ಲಿ ಶೇಖರಿಸಿಟ್ಟ ಮೂಟೆ)ಗಳ ಮೇಲೆ ಕುಳಿತುಕೊಳ್ಳಿಸುತ್ತಿದ್ದುದು ಅವರ ವೃತ್ತಿಯನ್ನು ಕುರಿತ ಲೋಕದೃಷ್ಟಿಯನ್ನು ಪ್ರತಿಬಿಂಬಿಸುತ್ತದೆ.



ಮದುವೆ ಸಂದರ್ಭದಲ್ಲಿ ನೀಡುವ ಊಟವು ಕೂಡ ಬಹಳಷ್ಟು ಮಹತ್ವವನ್ನು ಪಡೆದಿದೆ. ಇದು ಸಂಬಂಧವನ್ನು ಬೆಸೆಯುವ ಭಾವನಾತ್ಮಕತೆಯನ್ನು ಹೊಂದಿದೆ. ಮದುವೆಗೆ ಹೆಣ್ಣುಗಂಡು ಒಪ್ಪಿಗೆಯಾಗದಿದ್ದಲ್ಲಿ ಅವರು ಹೆಣ್ಣಿನ ಮನೆಯಲ್ಲಿ ಊಟ ಮಾಡುವ ಕ್ರಮವಿಲ್ಲ. ಹೆಣ್ಣನ್ನು

ನೋಡಿ ಒಪ್ಪಿಗೆಯಾದ ಅನಂತರವೇ ಗಂಡಿನ ಕಡೆಯವರು ಹೆಣ್ಣಿನ ಮನೆಯಲ್ಲಿ ಊಟ ಮಾಡುತ್ತಿದ್ದರು. ಕೆಲವೊಮ್ಮೆ ಮದುವೆಗಳಲ್ಲಿ ಜಗಳಗಳು ಏರ್ಪಟ್ಟು ಊಟ ಮಾಡದೆ ಸಂಬಂಧ ಗಳನ್ನು ಕಡಿದು ಹೊರಟುಹೋಗುತ್ತಿದ್ದ ದಾಖಲೆಗಳೂ ಸಿಗುತ್ತವೆ.

ಹಾಗಾಗಿ, ಮದುವೆಯ ದಿನ ಊಟಕ್ಕೆ ಹೆಚ್ಚಿನ ಮಹತ್ತ್ವವಿದೆ. ಮದುವೆ ಊಟ ಕಡಿಮೆಯಾಗ ಬಾರದು, ಹೆಚ್ಚಾದರೆ ಒಳ್ಳೆಯದು ಎನ್ನುವ ನಂಬಿಕೆಯಿದೆ. ಇಲ್ಲಿ ಮದುವೆ ಊಟ ಹೆಚ್ಚಾಗುವುದರ ಜೊತೆಗೆ ವಧೂವರರಿಗೆ ಏಳಿಗೆ ಉಂಟಾಗುತ್ತದೆ ಎನ್ನುವ ಭಾವನೆಗಳಿವೆ. ಹೀಗಾಗಿ ಗಂಡು ಹಾಗೂ ಹೆಣ್ಣಿನ ಕಡೆಯ ಸಂಬಂಧಿಕರು ಒಟ್ಟಿಗೆ ಕುಳಿತು ಒಂದೇ ಚಪ್ಪರದಲ್ಲಿ ಒಂದೇ ಬಗೆಯ ಆಹಾರವನ್ನು ಸೇವಿಸುವಲ್ಲಿ ಒಂದಾಗುವ ಭಾವಕ್ಕೆ ಒಳಗಾಗುತ್ತಾರೆ.

ಕುಡುಬಿಯರ ಮದುವೆಗಳಲ್ಲಿ ಹಾಡುವ ಹಾಡುಗಳು ಹೆಚ್ಚಿನ ಮಹತ್ತ್ವವನ್ನು ಹೊಂದಿವೆ. ಮದುವೆಯ ವಿಧಿವಿಧಾನಗಳಿಗೆ ಅನುಗುಣವಾಗಿ ಸಂದರ್ಭೋಚಿತವಾಗಿ ಈ ಹಾಡುಗಳನ್ನು ಮುತ್ತೈದೆಯರು ರಾಗಬದ್ಧವಾಗಿ ಹಾಡುತ್ತಾರೆ. ಈ ಹಾಡುಗಳಲ್ಲಿ ವ್ಯಕ್ತವಾಗುವ ಅವರ ಲೋಕಗ್ರಹಿಕೆಗಳು ಬಹಳ ಮುಖ್ಯವಾದವು. ಮದುವೆಯ ಆಚರಣೆಯಲ್ಲಿ ಬಳಸುವ ಪ್ರತಿಯೊಂದು ವಸ್ತುವೂ ಮತ್ತು ಆಚರಿಸುವ ವಿಧಿಗಳು ಅವರ ಅನುಭವದ ಹಿನ್ನೆಲೆಯಿಂದಲೇ ಬಂದಿದೆ. ಅದು ಅವರ ಸಂಸ್ಕೃತಿಯ ಅಂಗವಾಗಿದೆ. ಯಾವುದೇ ವಿಧಿಯನ್ನು ಆಚರಿಸುವಾಗ ಅದರ ಹಿಂದಿನ ಉದ್ದೇಶ ಅವರ ಲೋಕಗ್ರಹಿಕೆಯನ್ನು ಸೂಚಿಸುತ್ತದೆ. ಹಿಂದೆ ವಿವರಿಸಿದಂತೆ, ಮದುವೆಚಪ್ಪರ, ಬಳಸುವ ಅಕ್ಕಿ, ಹಿಂಗಾರ, ಧಾರೆ, ಊಟ –ಇವೆಲ್ಲ ವಂಶಾಭಿವೃದ್ಧಿಯನ್ನುಂಟುಮಾಡುವ, ಒಂದಾಗುವ, ಸಂಬಂಧಗಳನ್ನು ಗಟ್ಟಿಗೊಳಿಸುವ ಕೆಲಸಗಳನ್ನು ಮಾಡುತ್ತವೆ. ಮೇಲ್ನೋಟಕ್ಕೆ ವಿಧಿಗಳಾಗಿ ಕಂಡರೂ ಅವನ್ನು ಆಚರಿಸುವ ಹಿಂದಿನ ಉದ್ದೇಶ ಬಹಳ ಮುಖ್ಯ.

ಸಂಗ್ರಹಿಸಿದ ಅವರ ಮದುವೆ ಹಾಡುಗಳಲ್ಲಿ ಅವರು ಮದುವೆ ಸಂದರ್ಭದಲ್ಲಿ ಅವುಗಳನ್ನು ಹಾಡುವ ಮೂಲಕ ಅಕ್ಕತಂಗಿಯರಿಗೆ ಒಡಹುಟ್ಟಿದ ಅಣ್ಣತಮ್ಮನ ಮದುವೆಗಳಲ್ಲಿ ಯಾವ ರೀತಿಯ ಸ್ಥಾನಮಾನ ಇತ್ತು ಎನ್ನುವುದನ್ನು ಸುಚಿಸುತ್ತದೆ. ಅಣ್ಣ ತನ್ನ ತಂಗಿ ಅಥವಾ ಅಕ್ಕನನ್ನು ಮದುವೆಗೆ ಕರೆಯಲು ಹೋಗುತ್ತಾನೆ. ಆಗ ಆಕೆ, ನಾನಾ ಕಾರಣಗಳನ್ನು ಹೇಳಿ ತಾನು ಬರುವುದಿಲ್ಲ ಎಂದು ಹೇಳಿದರೂ ಅಣ್ಣ ಆಕೆಯ ಎಲ್ಲ ಸಮಸ್ಯೆಗಳಿಗೆ ಪರಿಹಾರವನ್ನು ನೀಡಿ ಕರೆದು ತರುತ್ತಾನೆ. ಅಣ್ಣ ಅಥವಾ ತಮ್ಮನ ಮದುವೆಯಲ್ಲಿ ಅಕ್ಕತಂಗಿಯರ ಪಾತ್ರ ತುಂಬ ದೊಡ್ಡದಾಗಿದೆ. ಕುಡುಬಿಯರಲ್ಲಿ ವಿಶೇಷವಾಗಿ ಬೇರೆ ಯಾವುದೇ ಶುಭಕಾರ್ಯಗಳಲ್ಲಿ ಭಾಗವಹಿಸುವ ಹಕ್ಕು ಕೊಟ್ಟ ಹೆಣ್ಣುಮಕ್ಕಳಿಗೆ ಇಲ್ಲ. ಆದರೆ ಅಣ್ಣ ಅಥವಾ ತಮ್ಮನ ಮದುವೆಯಲ್ಲಿ ಕೆಲವೊಂದು ವಿಶಿಷ್ಟ ಅಧಿಕಾರಗಳನ್ನು ಅವರು ಹೊಂದಿದ್ದಾರೆ. ಮದುಮಗನನ್ನು ಶೃಂಗಾರ ಮಾಡುವುದೇ ಆತನ ಅಕ್ಕ ಅಥವಾ ತಂಗಿ.

ಅಕ್ಕ ತನ್ನ ತಮ್ಮನಿಗೆ ಮದುವೆಯಾಗಿ ಆತ ತನ್ನ ಹೆಂಡತಿಯೊಡನೆ ಮನೆಯನ್ನು ಪ್ರವೇಶಿಸ

ಬೇಕಾದರೆ ಬಾಗಿಲಲ್ಲಿ ಅವರಿಬ್ಬರನ್ನು ತಡೆಯುತ್ತಾಳೆ. ಇದನ್ನು 'ಬಾಗಿಲುತಡೆಯುವುದು' ಎನ್ನುತ್ತಾರೆ. ಇಲ್ಲಿ ಆಕೆ ತನ್ನ ಕಳೆದುಹೋದ ಸಂಬಂಧವನ್ನು ಮತ್ತೆ ಬೆಸೆದುಕೊಳ್ಳಲು ಪ್ರಯತ್ನಿಸುವುದು ಕಂಡುಬರುತ್ತದೆ. ತನ್ನ ಮಗನಿಗೆ ತಮ್ಮನಿಗೆ ಹುಟ್ಟಲಿರುವ ಮಗಳನ್ನು ತರುವ ಒಪ್ಪಂದವನ್ನು ಮಾಡಿಕೊಳ್ಳುವುದರ ಮೂಲಕ ಮತ್ತೆ ಸಂಬಂಧವನ್ನು ಗಟ್ಟಿಗೊಳಿಸುತ್ತಾಳೆ. ಇಲ್ಲಿ ಅವಳ ದೃಷ್ಟಿ ಕೋನವನ್ನು ನಾವು ಕಾಣಬಹುದು.

ಹೆಣ್ಣಿನ ಮನೆಯಿಂದ ದಿಬ್ಬಣ ಹೊರಡುವ ಸಂದರ್ಭದಲ್ಲಿ ಹಾಡುವ ಒಂದು ಹಾಡಿನಲ್ಲಿ ಕುಡುಬಿಯರು ಮದುಮಗನನ್ನು ಕೃಷ್ಣನಾಗಿ ಮದುಮಗಳನ್ನು ರಾಧೆಯಾಗಿ ಕಾಣುತ್ತಾರೆ. ಇಲ್ಲಿ ಕೃಷ್ಣ–ರಾಧೆಯರ ಸಂಬಂಧ ಬಹಳ ಅನ್ಯೋನ್ಯವಾಗಿರುವಂಥದ್ದು. ಈ ಹಾಡಿನಲ್ಲಿ ಕೆಲವು ರಾಜರ ಹೆಸರುಗಳು ಬರುತ್ತವೆ; ಯುದ್ಧ ನಡೆಯುವುದನ್ನು ತಿಳಿಸುತ್ತವೆ; ನಿಶ್ಚಿತಾರ್ಥದ ವಿವರಗಳನ್ನು ನೀಡುತ್ತದೆ. ಇಲ್ಲಿ ಪುರಾಣದ ಪಾತ್ರಗಳ ಜೊತೆಗೆ ವರ್ತಮಾನದ ಸನ್ನಿವೇಶಗಳನ್ನು ಬೆಸೆಯುವ ಅವರ ದೃಷ್ಟಿಕೋನವನ್ನು ಕಾಣಬಹುದು.

ಧಾರೆಯೆರೆಯುವ ಸಂದರ್ಭದಲ್ಲಿ ಹಾಡುವ ಹಾಡುಗಳಲ್ಲಿ ಧಾರೆಯೆರೆಯುವುದು ಪುಣ್ಯದ ಕೆಲಸ ಎನ್ನುವ ದೃಷ್ಟಿಕೋನ ಅವರಲ್ಲಿದೆ. ಧಾರೆಯೆರೆಯಲು ಬಳಸುವ ತಾಮ್ರದ ತಂಬಿಗೆ, ಅದರಲ್ಲಿ ತುಂಬಿಸಿದ ಪವಿತ್ರ ಜಲ, ಅದರ ಮೇಲೆ ಇಡುವ ತೆಂಗಿನಕಾಯಿ ಮತ್ತು ಅದರ ಸುತ್ತ ಕಟ್ಟಲ್ಪಟ್ಟ ಹಲಸಿನ ಮತ್ತು ಮಾವಿನ ಎಲೆಗಳ ತೋರಣ ಇವೆಲ್ಲ ಸಮೃದ್ಧಿಯ ಸೂಚಕವಾಗಿ ಮೂಡಿ ಬಂದಿರುವುದನ್ನು ಕಾಣಬಹುದು. ಮದುವೆಯ ಗಂಡಿನ ಕೈಯ ಮೇಲೆ ಮದುಮಗಳ ಕೈಯನ್ನು ಇಡುವ ಪದ್ಧತಿ ಸಂಪೂರ್ಣವಾಗಿ ಹುಡುಗನಿಗೆ ಆ ಹುಡುಗಿಯನ್ನು ಒಪ್ಪಿಸಿ ಎರಡು ಕುಟುಂಬಗಳ ನಡುವೆ ಸಂಬಂಧವನ್ನು ಬೆಸೆಯುವ ಕಾರ್ಯವನ್ನು ಮಾಡುತ್ತದೆ. ಧಾರೆಯೆರೆಯು ವುದರ ಮೂಲಕ ಅವರಿಗೆ ಸತಿಪತಿಗಳಾಗಿ ಬಾಳುವ ಅಧಿಕಾರವನ್ನು ನೀಡುವುದನ್ನು ಗಮನಿಸಬಹುದು. ಇಲ್ಲಿ ಧಾರೆಯೆರೆದವರಿಗೆ ಕಾಶಿಗೆ ಹೋದ ಪುಣ್ಯ ದೊರೆಯುತ್ತದೆ. ನೆರೆದ ಸಭಿಕರೆಲ್ಲರಿಗೂ ಈ ಪುಣ್ಯದಲ್ಲಿ ಪಾಲಿದೆ ಎನ್ನುತ್ತವೆ ಮದುವೆ ಹಾಡುಗಳು. ಇಲ್ಲಿ ಧಾರೆಯೆರೆಯುವುದು ಬಹಳ ಪುಣ್ಯದ ಕೆಲಸ ಮತ್ತು ಅಲ್ಲಿ ನೆರೆದ ಎಲ್ಲರಿಗೂ ಇದರಿಂದ ಪುಣ್ಯ ದೊರೆಯುತ್ತದೆ ಎನ್ನುವಂತಹದ್ದು ಮದುವೆಯ ಸಂದರ್ಭದಲ್ಲಿ ಧಾರೆಮುಹೂರ್ತಕ್ಕೆ ಇರುವ ಪ್ರಾಧಾನ್ಯವನ್ನು ಹೆಚ್ಚಿಸುತ್ತದೆ. ಇದನ್ನು ಧಾರ್ಮಿಕ ಚೌಕಟ್ಟಿನೊಳಗೆ ತರುವುದರ ಮೂಲಕ ಆ ಹೊತ್ತಿನಲ್ಲಿ ಎಲ್ಲರೂ ಸೇರಬೇಕು ಎನ್ನುವ ಮನೋಧರ್ಮವನ್ನು ಅದು ನೀಡುತ್ತದೆ.

ಧಾರೆಯ ಅನಂತರ ನಡೆಯುವ ಓಕುಳಿನೀರಿನಲ್ಲಿ ಉಂಗುರ ಹುಡುಕುವ ವಿನೋದ ಮದುಮಕ್ಕಳಲ್ಲಿ ಪರಸ್ಪರ ಅನ್ಯೋನ್ಯತೆ, ಸಲಿಗೆ, ಸ್ಪರ್ಶಸುಖಾನುಭವವನ್ನು ನೀಡುವ ಹಿನ್ನೆಲೆಯಲ್ಲಿ ಇದನ್ನು ಒಂದು ವಿಧಿಯಾಗಿ ಮದುವೆ ಸಂದರ್ಭದಲ್ಲಿ ಆಚರಿಸುತ್ತಿರುವುದನ್ನು ಕಾಣಬಹುದು. ಈ ಆಚರಣೆಗಳ ಹಿಂದಿನ ಕುಡುಬಿಯರ ಆಲೋಚನೆಗಳೇ ಲೋಕಗ್ರಹಿಕೆಗಳು.

ಕುಡುಬಿಯರಲ್ಲಿ ಮದುವೆಯ ದಿನ ಸಂಜೆ ನಡೆಯುವ ನಾಗನ ಆರಾಧನೆಯು ಒಂದು ವಿಶಿಷ್ಟವಾದ ಆಚರಣೆ. ತುಳುನಾಡಿನಲ್ಲಿ ನಾಗಾರಾಧನೆ ಸಂತಾನಾಭಿವೃದ್ಧಿಗಾಗಿ ನಡೆಯುತ್ತಾ ಬಂದಿರುವ ಪದ್ಧತಿ. ಈ ಪದ್ಧತಿಯನ್ನು ಕುಡುಬಿಯರು ತಮ್ಮದಾಗಿಸಿಕೊಂಡಿದ್ದಾರೆ. ನಾಗನಿಗೆ ಪ್ರಿಯವಾದ ವಸ್ತುಗಳನ್ನು ಆತನಿಗೆ ಒಪ್ಪಿಸಿ ಆತನನ್ನು ಸಂತೋಷಗೊಳಿಸಿ ನವದಂಪತಿಗಳು ತಮ್ಮ ಇಷ್ಟಾರ್ಥಗಳನ್ನು ನಾಗನ ಮುಂದಿಟ್ಟು ಈಡೇರಿಸಿಕೊಡಲು ಪ್ರಾರ್ಥಿಸುತ್ತಾರೆ. ಇಲ್ಲಿ ಅವರ ಆರಾಧನಾ ಸ್ವರೂಪಗಳನ್ನು ಕಾಣಬಹುದು. ಒಂದು ಆರಾಧನೆಯ ಹಿಂದೆ ಅವರ ಲೋಕದೃಷ್ಟಿ ಯಾವ ರೀತಿ ಕೆಲಸ ಮಾಡುತ್ತದೆ ಎನ್ನುವುದನ್ನು ಇಲ್ಲಿ ಸೂಚಿಸಲಾಗಿದೆ. ಇದು ಅವರ ಮದುವೆ ಹಾಡುಗಳ ಮೂಲಕ ವ್ಯಕ್ತವಾಗಿರುವುದನ್ನು ಕಾಣಬಹುದು.

ಕುಡುಬಿಯರ ಮದುವೆ ಸಂದರ್ಭದಲ್ಲಿ ಹಾಡುವ ಹಾಡುಗಳು ಅವರು ತಮ್ಮ ಸುತ್ತಲಿನ ಪರಿಸರವನ್ನು ಕಂಡ ಅನುಭವಿಸಿದ ಹಿನ್ನೆಲೆಯಲ್ಲಿ ಮೂಡಿಬಂದಿವೆ. ಅವರು ಹಾಡುಗಳ ಮೂಲಕ ಅದನ್ನು ಅಭಿವ್ಯಕ್ತಿಸಿರುವುದನ್ನು ಕಾಣಬಹುದು. ಅವರ ಬದುಕಿನ ಆಚರಣೆಗಳಲ್ಲಿ, ವಿಧಿವಿಧಾನ ಗಳಲ್ಲಿ ಪ್ರತಿಯೊಂದಕ್ಕೂ ಒಂದು ಮಹತ್ತ್ವವಿದೆ. ಈ ಮಹತ್ತ್ವಕ್ಕೆ ಹಿನ್ನೆಲೆಯಾಗಿ ಅವರ ಲೋಕಗ್ರಹಿಕೆಗಳು ಕೆಲಸ ಮಾಡುತ್ತವೆ. ಯಾವುದೇ ವಿಧಿವಿಧಾನಗಳನ್ನು, ಹಬ್ಬ ಹರಿದಿನಗಳನ್ನು ಆಚರಿಸುವಾಗಲೂ ಅವರ ಈ ಲೋಕಗ್ರಹಿಕೆ ಅಲ್ಲಿ ವ್ಯಕ್ತವಾಗುತ್ತದೆ. ಇವುಗಳ ಹಿಂದೆ ಯಾವುದೋ ಒಂದು ಉದ್ದೇಶವಿರುವುದು ಕಂಡುಬರುತ್ತದೆ. ಈ ಉದ್ದೇಶವೇ ಅವರ ಲೋಕಗ್ರಹಿಕೆಯ ಹಿನ್ನೆಲೆಯಿಂದ ಉಂಟಾಗಿರುವಂಥದ್ದು.

* * *

ಅಧ್ಯಾಯ ಐದು

# ಸಾರಾಂಶ

ಕರಾವಳಿ ಕರ್ನಾಟಕಕ್ಕೆ ಹದಿನಾರನೇ ಶತಮಾನದಲ್ಲಿ ಗೋವೆಯಿಂದ ವಲಸೆ ಬಂದ ಕುಡುಬಿಯರು ಇಲ್ಲಿಯ ಜನರೊಡನೆ ಬೆರೆತು ಈಗ ಅವರ ಮೂಲ ಸಂಸ್ಕೃತಿಗಿಂತ ಭಿನ್ನವಾದ ಸಂಸ್ಕೃತಿಯನ್ನು ಅಳವಡಿಸಿಕೊಂಡು ಬದುಕುತ್ತಿರುವುದು ಕಂಡುಬರುತ್ತದೆ. ಕುಡುಬಿಯರ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿರುವ ಮದುವೆ ಮತ್ತು ಆ ಸಂದರ್ಭದಲ್ಲಿ ಹಾಡುವ ಹಾಡುಗಳ ಮೇಲೆ ಬೆಳಕು ಚೆಲ್ಲುವ ಕಿರುನೋಟವಾಗಿ ಈ ಸಂಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

ಈ ಸಂಪ್ರಬಂಧದಲ್ಲಿ ಕುಡುಬಿಯರ ಜನಾಂಗ ಪರಿಚಯವನ್ನು ನೀಡಲಾಗಿದೆ. ಕುಡುಬಿಯರ ಆಚರಣೆಗಳ ಮೇಲೆ ಬೆಳಕನ್ನು ಚೆಲ್ಲಲಾಗಿದೆ. ವಕ್ತೃಗಳಿಂದ ಸಂಗ್ರಹಿಸಿದ ಮಾಹಿತಿಗಳ ಆಧಾರದಲ್ಲಿ ಹಾಗೂ ಪುಸ್ತಕಗಳಲ್ಲಿ ದೊರೆತ ಮಾಹಿತಿಗಳ ಆಧಾರವನ್ನು ಗಮನದಲ್ಲಿರಿಸಿಕೊಂಡು ಸಾಂದರ್ಭಿಕವಾಗಿ ಅವುಗಳನ್ನು ಈ ಸಂಪ್ರಬಂಧದಲ್ಲಿ ನೀಡಲಾಗಿದೆ.

ಕುಡುಬಿಯರ ಮದುವೆಯಲ್ಲಿ ಆಚರಿಸಲ್ಪಡುವ ಬೇರೆ ಬೇರೆ ವಿಧಿಗಳನ್ನು ಹಂತಹಂತವಾಗಿ ವಿವರಿಸುವುದರ ಜೊತೆಗೆ ಆ ವಿಧಿಗಳಿಗೆ ಸಂಬಂಧಪಟ್ಟ ಹಾಡುಗಳನ್ನು ನೀಡುವುದರ ಮೂಲಕ ಅವುಗಳ ಹಿಂದಿರುವ ಲೋಕದೃಷ್ಟಿಯ ಕುರಿತ ವಿಚಾರಗಳನ್ನು ಸಂಪ್ರಬಂಧದಲ್ಲಿ ದಾಖಲಿಸಿಕೊಳ್ಳಲಾಗಿದೆ.

ಮದುವೆಯಲ್ಲಿ ನಡೆಯುವ ಎಲ್ಲ ವಿಧಿಗಳಿಗೂ ಮತ್ತು ಬಳಸುವ ಎಲ್ಲ ವಸ್ತುಗಳಿಗೂ ಒಂದು ಮಹತ್ತ್ವ ಇರುವುದನ್ನು ಗುರುತಿಸಲಾಗಿದೆ. ಈ ಮಹತ್ತ್ವಗಳು ಕುಡುಬಿಯರು ತಾವು ಬದುಕಿದ ಪರಿಸರದೊಂದಿಗೆ ಹೊಂದಿದ ಸಂಬಂಧಗಳ ಹಿನ್ನೆಲೆಯನ್ನು ಒಳಗೊಂಡಿರುವುದನ್ನು ಗಮನಿಸಲಾಗಿದೆ. ಈ ನಿಟ್ಟಿನಲ್ಲಿ ಅವರ ಮದುವೆಗಳ ವಿಧಿವಿಧಾನಗಳಿಗೆ ಹೆಚ್ಚು ಪ್ರಾಮುಖ್ಯ ಬಂದಿರುವುದನ್ನು ಗುರುತಿಸಲಾಗಿದೆ.

ಗೋವೆಯಿಂದ ಆ ಕಾಲಘಟ್ಟದಲ್ಲಿ ವಲಸೆ ಬಂದ ಇತರ ವರ್ಗದವರ ಮದುವೆ ಸಂಬಂಧಿ ಆಚರಣೆಗಳ ಜೊತೆಗೆ ಕುಡುಬಿಯರ ಮದುವೆ ಸಂಬಂಧಿ ಆಚರಣೆಗಳನ್ನು ತುಲನಾತ್ಮಕವಾಗಿ ನಿರೂಪಿಸುತ್ತಾ ಅವುಗಳ ನಡುವಿನ ಹೋಲಿಕೆಯು ಸಂಶೋಧನೆಯ ಮೂಲಕ ಕಂಡುಕೊಂಡ ಹೊಸ ವಿಚಾರವಾಗಿದೆ. ಇದನ್ನು ಈ ಹಿಂದೆ ಯಾರೂ ಎಲ್ಲೂ ಉಲ್ಲೇಖಿಸಿದ್ದು ಗಮನಕ್ಕೆ ಬಂದಿಲ್ಲ. ಹೀಗಾಗಿ ಮೂಲದಲ್ಲಿ ಒಂದೇ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿದ್ದು ಕಾಲಕ್ರಮೇಣ ಕರಾವಳಿ ಕರ್ನಾಟಕದ ಭಿನ್ನ ಪ್ರದೇಶಗಳಲ್ಲಿ ವಾಸ ಮಾಡಿದ್ದರಿಂದ ಈ ವರ್ಗಗಳಲ್ಲಿ ಪರಸ್ಪರ ಯಾವುದೇ ಸಂಬಂಧಗಳು ಉಳಿಯದೆ ಇರುವುದನ್ನು ಕಾಣಲಾಗಿದೆ.

ಹೀಗೆ ಕುಡುಬಿಯರು ದಟ್ಟವಾದ ಕಾಡುಗಳ ನಡುವೆ ತಮ್ಮ ವಾಸಸ್ಥಾನವನ್ನು ನಿರ್ಮಿಸಿಕೊಂಡು ಬದುಕು ಸಾಗಿಸುತ್ತಾ ಯಾರ ಜೊತೆಯೂ ಬೆರೆಯದೇ ಇದ್ದುದರಿಂದ ಸುಮಾರು ಮೂವತ್ತು ವರ್ಷಗಳ ಹಿಂದಿನ ವರೆಗೂ ಮೂಲ ಸಂಸ್ಕೃತಿಯನ್ನು ಬಹಳ ಜತನದಿಂದ ಕಾಪಾಡಿಕೊಂಡು ಬಂದ ಮಾಹಿತಿಗಳು ದೊರೆಯುತ್ತವೆ. ಆದರೆ ಇಂದು ನಾಗರೀಕತೆಯ ಪ್ರಭಾವದಿಂದ ಅವರಲ್ಲಿ ಬಹಳಷ್ಟು ಬದಲಾವಣೆಗಳಾಗಿವೆ. ಇವರು ತಮ್ಮ ಮೂಲ ಸಂಸ್ಕೃತಿಯನ್ನು ಮರೆತು ಹೊಸತರೆಡೆಗೆ ದಾಪುಗಾಲು ಇಡುತ್ತಿರುವುದು ಕಂಡುಬರುತ್ತದೆ.

ಈ ಸಂಕ್ರಮಣಕಾಲದಲ್ಲಿ ಕುಡುಬಿಯರ ಮದುವೆ ಸಂಬಂಧಿ ಆಚರಣೆಗಳು ಮತ್ತು ಮದುವೆ ಹಾಡುಗಳು ಸಂಪೂರ್ಣವಾಗಿ ನಶಿಸಿಹೋಗುವ ಮೊದಲು ಅವುಗಳನ್ನು ಆದಷ್ಟು ಸಂಗ್ರಹಿಸಿ ದಾಖಲಿಸಿ ಇಡುವ ಪ್ರಯತ್ನವನ್ನು ಈ ಸಂಪ್ರಬಂಧದಲ್ಲಿ ಮಾಡಲಾಗಿದೆ. ಇಂದಿನ ಕುಡುಬಿ ಯುವಕಯುವತಿಯರಿಗೆ ಈ ಮದುವೆ ಸಂಬಂಧಿ ಆಚರಣೆಗಳು ಮತ್ತು ಹಾಡುಗಳ ಬಗ್ಗೆ ಯಾವುದೇ ಮಾಹಿತಿಗಳು ಇರದೆ ಇರುವುದು ಕಂಡುಬಂದಿದೆ.

ಪ್ರಸ್ತುತ ಈ ಸಂಶೋಧನೆಯ ಉದ್ದೇಶಕ್ಕಾಗಿ ಕುಡುಬಿಯರ ಆರು ಪಂಗಡಗಳಲ್ಲಿ ಒಂದಾದ ಗೋವೆಯ ಕುಡುಬಿಯರ ಮದುವೆ ಹಾಡುಗಳನ್ನು ಮಾತ್ರ ಮುಖ್ಯವಾಗಿಟ್ಟು ಅಧ್ಯಯನವನ್ನು ನಡೆಸಲಾಗಿದೆ. ಗೋವೆ ಕುಡುಬಿಯರ ಮದುವೆಹಾಡುಗಳನ್ನು ಸಮಗ್ರವಾಗಿ ಸಂಗ್ರಹಿಸಿ ದಾಖಲಿಸುವ ಒಂದು ಪ್ರಯತ್ನ ನಡೆದಿದೆ. ಇನ್ನು ಉಳಿದ ಐದು ಪಂಗಡಗಳಲ್ಲಿ ಮದುವೆ ಸಂಬಂಧಿ ಹಾಡುಗಳು ದೊರೆಯುತ್ತವೆ ಹಾಗೂ ಈ ಹಿನ್ನೆಲೆಯಿಂದ ಅಧ್ಯಯನ ಮಾಡಲು ಸಾಕಷ್ಟು ಲಭ್ಯವಾಗುತ್ತವೆ. ಮುಂದಿನ ಆಸಕ್ತ ಸಂಶೋಧಕರಿಗೆ ಇವು ಅಧ್ಯಯನಯೋಗ್ಯ ವಿಷಯವಾಗಬಲ್ಲವು.

ಅದೇ ರೀತಿ, ಕುಡುಬಿಯರ ಈ ಆರು ಪಂಗಡಗಳು ಪ್ರಾದೇಶಿಕವಾಗಿ ಬೇರೆ ಬೇರೆ ಕಡೆಗಳಲ್ಲಿ ವಾಸ ಮಾಡುತ್ತಿರುವುದು ಮತ್ತು ಅವರ ಭಾಷೆ, ರೀತಿನೀತಿ, ಆಚಾರವಿಚಾರಗಳಲ್ಲಿ ಬಹಳಷ್ಟು ವ್ಯತ್ಯಾಸಗಳಿರುವುದು ಕಂಡುಬರುತ್ತದೆ. ಹೀಗೆ ಭಿನ್ನ ಅಂಶಗಳನ್ನು ಒಳಗೊಂಡ ಈ ಪಂಗಡಗಳ ನಡುವಿನ ಅನೇಕ ವಿಷಯಗಳು ಸಂಶೋಧಕರಿಗೆ ತೌಲನಿಕ ಅಧ್ಯಯನಕ್ಕೆ ವಿಪುಲವಾದ ವಸ್ತು, ವಿಚಾರಗಳನ್ನು ಒದಗಿಸುತ್ತವೆ. ಮತ್ತು ಇಂತಹ ಅಧ್ಯಯನ ಅವಶ್ಯವಾಗಿ ನಡೆಯಬೇಕಾಗಿದೆ.

* * *




ಮದುವೆ ನಡೆಯುವ ಮನೆ (ಹಿರಿಮನೆ)



ತೋರಣ ಕಟ್ಟುವ ಕಾರ್ಯದಲ್ಲಿ ಊರಿನ ಜಾತಿಬಾಂಧವರು



ತೋರಣ ಕಟ್ಟುವ ಶಾಸ್ತ್ರ



ಹೆಣ್ಣಿನ ದಿಬ್ಬಣ ಎದುರುಗೊಳ್ಳುವುದು



ವೀಳ್ಯ ಬದಲಾಯಿಸುವುದು



ಹೆಣ್ಣಿಗೆ ಧಾರೆಸೀರೆಯನ್ನು ನೀಡುವುದು



ಹುಡುಗನಿಗೆ ಬಾಸಿಂಗ ಕಟ್ಟುವುದು



ವಧೂದಕ್ಷಿಣೆ ನೀಡುವುದು



ತಾಳಿ ಕಟ್ಟುವುದು



ಧಾರೆಯೆರೆಯುವುದು



ಸಾಂಪ್ರದಾಯಿಕ ಉಡುಪು – ಗೇಂಟಿ



ಆಧುನಿಕ ಮತ್ತು ಸಾಂಪ್ರದಾಯಿಕ ಉಡುಪುಗಳ ಮುಖಾಮುಖಿ



ಕುಡುಬಿ ಪಿತೃಪ್ರಧಾನ ಕುಟುಂಬ




ಆಧುನಿಕ ಮದುವೆ ಮಂಟಪ



ವಕ್ತೃಗಳು, ಬೆನೆಗಲ್



ಚಾಪೆ ಹೆಣೆಯುವ ಕುಡುಬಿ ಹೆಂಗಸು (ಕೃಪೆ : ಡಾ। ವೈ. ರವೀಂದ್ರನಾಥ ರಾವ್)



ವಕ್ತೃಗಳು, ಒಳಬೈಲು



ವಕ್ತೃಗಳು, ಒಳಬೈಲು

ಅನುಬಂಧ -೨

# ಗ್ರಂಥಋಣ


೧. **ಅಟ್ಟೆ ಕುಣುಬಿಗಳು** – ಸುಬ್ರಾಯ ಹೆಗಡೆ, ಐಬಿಎಚ್. ಪ್ರಕಾಶನ, ಗಾಂಧಿನಗರ, ಬೆಂಗಳೂರು (೧೯೮೫)

೨. **ಆನ್ವಯಿಕ ಜಾನಪದ** – ಡಾ। ಬಿ. ಎ. ವಿವೇಕ ರೈ (೧೯೮೧)

೩. **ಕನ್ನಡ ಸಂಶೋಧನ ಶಾಸ್ತ್ರ** – ಎಂ. ಎಂ. ಕಲಬುರ್ಗಿ

೪. **ಕನ್ನಡ ಸಾಹಿತ್ಯ ಸಂಶೋಧನೆ : ಮಾರ್ಗ ಮತ್ತು ಇತಿಹಾಸ** – ಸಂಗಮೇಶ ಸವದತ್ತಿಮಠ

೫. **ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು** – ಡಾ। ಗಾಯತ್ರಿ ನಾವಡ (೧೯೯೯)

೬. **ಕಾಡುಕಾಂಕ್ರೀಟು ಮತ್ತುಜಾನಪದ** – ಹಿ.ಚಿ. ಬೋರಲಿಂಗಯ್ಯ, ಅಕ್ಷರ ಪ್ರಕಾಶನ ಸಾಗರ.

೭. **ಕಾಸ್ಟ್ಸ್ ಅಂಡ್ ಟ್ರೈಬ್ಸ್ ಆಫ್ ಸದರ್ನ್ ಇಂಡಿಯಾ** – ಇ. ಥರ್ಸ್ಟನ್

೮. **ಕುಡುಬಿ ಒಂದು ಜನಾಂಗೀಯ ಅಧ್ಯಯನ** (ಲೇಖನ) – ಪೂರ್ಣಿಮಾ

೯. **ಕುಡುಬಿಯರು** – ಎ. ವಿ. ನಾವಡ, ರಾಜ್ಯ ಸಂಪನ್ಮೂಲ ಕೇಂದ್ರ, ಮೈಸೂರು (೧೯೮೯)

೧೦. **ಕುಡುಬಿ ಬುಡಕಟ್ಟು ಜನಾಂಗ ಒಂದು ಕಿರುಪರಿಚಯ** – ಹೋಳಿ ಸಮಾವೇಶ ಮತ್ತು ಕಲಾಪ್ರದರ್ಶನ, ಗೋಳಿಅಂಗಡಿ, ಉಡುಪಿ ಜಿಲ್ಲೆ (೨೦೦೫)

೧೧. **ಕುಡ್ಮಿ ಕೊಂಕಣಿ ಲೋಕವೇದ್** – ಡಾ। ಜೆರಾಲ್ಡ್ ಪಿಂಟೋ, ದಿವ್ಯದೀಪಕ ಪ್ರಕಾಶನ, ಕಲ್ಯಾಣಪುರ (೨೦೦೦)

೧೨. **ಕುಡ್ಮಿ ಜಾನಪದ ಸಂಗ್ರಹ್** – (ಸಂ) ಡಿ. ವಿ. ಪ್ರಕಾಶ್

೧೩. **ಕೊಂಕಣದ ಕುಡುಬಿಯರು** – ಪ್ರೊ। ಎ. ವಿ. ನಾವಡ, ಪ್ರಕಾಶಕರು, ಕರ್ನಾಟಕ ಸರಕಾರ, ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ. (೨೦೦೮)

೧೪. **ಗೌಡ ಜನಾಂಗದ ಮದುವೆ : ಸಾಂಕೇತಿಕತೆ** – ಡಾ। ಪುರುಷೋತ್ತಮ ಬಿಳಿಮಲೆ

೧೫. **ಜನಪದ ವೈಜ್ಞಾನಿಕ ಕ್ಷೇತ್ರಕಾರ್ಯ** – ಸಿ. ಸಿ. ಎ. ಪೈ

೧೬. **ಟ್ರೈಬ್‌ಲ್ ಟ್ರೆಡಿಶನ್ ಅಂಡ್ ಚೇಂಜ್ – ಎ ಸ್ಟಡಿ ಆಫ್ ಕುಡುಬಿಸ್ ಆಫ್ ಸೌತ್ ಇಂಡಿಯಾ** – ವೈ ರವೀಂದ್ರನಾಥ ರಾವ್ (೨೦೦೩)

೧೭. **ತವರಿನ ಕಟ್ಟು ಕಡಿವ ಕುಡುಬಿ ವಿವಾಹ** (ಲೇಖನ) – ಗಾಯತ್ರಿ ವಿ. ನಾವಡ

೧೮. **ತುಳು ಜನಪದ ಕಾವ್ಯಗಳಲ್ಲಿ ಪ್ರಕಟವಾದ ಲೋಕದೃಷ್ಟಿಯ ಸ್ವರೂಪ** – ಶ್ರೀಮತಿ ರಾಜಶ್ರೀ

೧೯. **ತುಳು ಜಾನಪದ ಸಾಹಿತ್ಯ** (ಸಂಶೋಧನ ಪ್ರಬಂಧ) – ಡಾ। ಬಿ. ಎ. ವಿವೇಕ ರೈ

೨೦. **ತುಳುನಾಡಿನ ಪ್ರಾಣಿ ಜಾನಪದ** – ಡಾ। ಅಶೋಕ ಆಳ್ವ (೧೯೯೫)

೨೧. **ದಕ್ಷಿಣ ಕನ್ನಡದ ಕುಡುಬಿಯರು** – ಈಶ್ವರ್ ಎನ್. ಜೋಶಿ, ಐಬಿಎಚ್ ಪ್ರಕಾಶನ, ಗಾಂಧಿನಗರ, ಬೆಂಗಳೂರು (೧೯೮೩)

೨೨. **ದಕ್ಷಿಣ ಕನ್ನಡ ಜಿಲ್ಲೆಯ ಭೈರರು** – ಡಾ। ಡಿ. ಆರ್. ಪಾಂಡುರಂಗ

೨೩. **ದಕ್ಷಿಣ ಕನ್ನಡದ ತೀಯಾ ಜನಾಂಗ : ಒಂದು ಸಾಂಸ್ಕೃತಿಕ ಅಧ್ಯಯನ** – ಸಂಗೀತಾ ಎಂ.

೨೪. **ದಕ್ಷಿಣ ಕನ್ನಡದ ಶಿಶುಗೀತೆಗಳು** – ಭಾರತೀದೇವಿ ಎಂ.

೨೫. **ಬಂಜಾರ ಲಂಬಾಣಿ** – ಡಾ। ಡಿ. ಬಿ. ನಾಯಕ್

೨೬. **ಬಿಲ್ಲವರು ಒಂದು ಸಾಂಸ್ಕೃತಿಕ ಅಧ್ಯಯನ** – ಎಂ. ದೇಜಪ್ಪ ದಲ್ಲೋಡಿ

೨೭. **ಬುಡಕಟ್ಟು ಅಧ್ಯಯನ** – (ಸಂ) ಡಾ। ಹಿ. ಚಿ. ಬೋರಲಿಂಗಯ್ಯ
ಎ. ಎಸ್. ಪ್ರಭಾಕರ್

೨೮. **ಭೂತನಾಗರ ನಡುವೆ** – ಲೀಲಾ ಭಟ್, ಪ್ರಕೃತಿ ಪ್ರಕಾಶನ, ಕೋಟೆಕಾರ್

೨೯. **ಭೂತಾರಾಧನೆ** – ಡಾ। ಚಿನ್ನಪ್ಪ ಗೌಡ

೩೦. **ಮನ್ಸ ಜನಾಂಗ : ಸಾಂಸ್ಕೃತಿಕ ಅಧ್ಯಯನ** – ಕರಿಯ ಎಚ್. (೧೯೯೪)
ಎಂ. ಎ. ಸ್ನಾತಕೋತ್ತರ ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ

೩೧. **ಮುಕ್ರಿಗಳ ಗೀತ ಮತ್ತು ಕತೆಗಳು** – (ಸಂ) ಡಾ। ಎನ್. ಆರ್. ನಾಯಕ, ಜಾನಪದ ಪ್ರಕಾಶನ, ಹೊನ್ನಾವರ (೨೦೦೦)

೩೨. **ಮುಗೇರರು ಜನಾಂಗ ಜಾನಪದ ಅಧ್ಯಯನ** – ಡಾ। ಅಭಯ ಕೌಕ್ರಾಡಿ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ನೃಪತುಂಗ ರಸ್ತೆ, ಬೆಂಗಳೂರು;
ಕರ್ನಾಟಕ ತುಳುಸಾಹಿತ್ಯ ಅಕಾಡೆಮಿ, ಲಾಲ್‌ಬಾಗ್, ಮಂಗಳೂರು.

೩೩. **ಸಂಶೋಧನ ರಂಗ** – ತಾಳ್ತಜೆ ವಸಂತಕುಮಾರ್

೩೪. **ಸಂಶೋಧನ ವಿಧಾನ** – ಪ. ವಿ. ಕುಲಕರ್ಣಿ

೩೫. **ಸಂಶೋಧನ ಶಾಸ್ತ್ರ** – ಹೊಸ್ಕೆರೆ ಶಿವಸ್ವಾಮಿ

೩೬. **ಸಂಶೋಧನೆ** – ಡಾ। ಚಿದಾನಂದಮೂರ್ತಿ

೩೭. **ಸಾಮಾಜಿಕ ಸಂಶೋಧನ ವಿಧಾನಗಳು** – ಇಂದಿರಾ ಆರ್.

೩೮. **ಸಾಹಿತ್ಯ ಸಂಶೋಧನ ಮಾರ್ಗ** – ಸಂಗಮೇಶ ಸವದತ್ತಿಮಠ

* * *

# ವಕ್ತೃ ವಿವರ

**ಮಾಹಿತಿದಾರರ ಹೆಸರು ಮತ್ತು ವಿಳಾಸಗಳು**

ಗಾಂಜೀಬಾಯಿ
ಪ್ರಾಯ ೮೦
ನಡುಕೆರೆ, ಮೇಲ್ಮನೆ, ಯೆಡ್ತಾಡಿ

ಗಿರಿಜಾಬಾಯಿ
ಪ್ರಾಯ ೫೦
ಒಳಬೈಲು

ಜಲಜಾಬಾಯಿ
ಪ್ರಾಯ ೪೦
ಪೆಜಮಂಗೂರು ಗ್ರಾಮ,
ಬೆನೆಗಲ್

ದೇವ ನಾಯ್ಕ
ಪ್ರಾಯ ೪೦
ಕುಸುವಿನ್‌ತೋಟ
ಅಲ್ಬಾಡಿ

ಪಾರ್ವತೀಬಾಯಿ
ಪ್ರಾಯ ೪೦
ಒಳಬೈಲು

ಪುರುಷ ನಾಯ್ಕ
ಪ್ರಾಯ ೬೫
ಹೌಸ್ಕುಂದು, ಪಡುಬೆಟ್ಟು
ಅಂಡಾರುಕಟ್ಟೆ, ಆವರ್ಸೆ

ಬೆಳ್ಳ ನಾಯ್ಕ
ಪ್ರಾಯ ೩೨
ಮೈರ್‌ಕೊಂಬೆ

ಭೀಮ ನಾಯ್ಕ
ಪ್ರಾಯ ೬೦
ಕುಸುವಿನ್‌ತೋಟ
ಅಲ್ಬಾಡಿ

ರತ್ನಾಬಾಯಿ
ಪ್ರಾಯ ೪೦
ಪೆಜಮಂಗೂರು ಗ್ರಾಮ,
ಬೆನೆಗಲ್

ರಾಮ ನಾಯ್ಕ
ಪ್ರಾಯ ೪೦
ನಡುಕೆರೆ, ಮೇಲ್ಮನೆ, ಯೆಡ್ತಾಡಿ

ರಾಮ ನಾಯ್ಕ
ಪ್ರಾಯ ೬೮
ಹೌಸ್ಕುಂದು, ಪಡುಬೆಟ್ಟು,
ಆಂಡಾರುಕಟ್ಟೆ, ಆವರ್ಸೆ

ರುಕ್ಮಿಣೀ ನಾಯ್ಕ
ಪ್ರಾಯ ೪೫
ಕುಸುವಿನ್‌ತೋಟ
ಅಲ್ಬಾಡಿ

ರುಕ್ಮಿಣೀಬಾಯಿ
ಪ್ರಾಯ ೭೦
ಸತ್ತುಮನೆ, ನಡುಕೆರೆ, ಯೆಡ್ತಾಡಿ

ವಸಂತ ನಾಯ್ಕ
ಪ್ರಾಯ ೩೦
ಕೊರ್ಕರ್ಣೆ

ಸಣ್ಣ ನಾಯ್ಕ
ಪ್ರಾಯ ೪೮
ಪೆಜಮಂಗೂರು ಗ್ರಾಮ
ಬೆನೆಗಲ್

ಸಾಂತೂಬಾಯಿ
ಪ್ರಾಯ ೬೭
ನಡುಮನೆ, ಯೆಡ್ತಾಡಿ

ಸುಬ್ರಾಯ ನಾಯ್ಕ
ಪ್ರಾಯ ೫೦
ನಡುಕೆರೆ, ಮೇಲ್ಮನೆ, ಯೆಡ್ತಾಡಿ

